# ಮಾಲ್ಟೋವಾ ಟೋಳಿ—
## ತುಂಬು ಉತ್ಸಾಹದ ತುಂಟರು, ಎಲ್ಲೇನು ಮಾಡುವರೋ ಯಾರು ಬಲ್ಲರು!

ತುಂಬಿ ತುಳುಕುವ ಉತ್ಸಾಹ... ಆಟ-ಪಾಠಗಳಲ್ಲಿ ಉತ್ಸಾಹದ ಹೊನಲಿನೊಂದಿಗೆ ಮನಸಾರೆ ಭಾಗವಹಿಸುವ ಮಕ್ಕಳು. ಅದಕ್ಕಾಗಿಯೇ ಈ ಮಕ್ಕಳಿಗೆ ಬೇಕು— ಮಾಲ್ಟೋವಾ. ಉತ್ಕೃಷ್ಟ ಗೋಧಿ, ಶುದ್ಧ ಹಾಲು, ಶ್ರೇಷ್ಠ ಕೋಕೋ ಮತ್ತು ಸಕ್ಕರೆಯ ಸಂಪೂರ್ಣ ಸತ್ವಗಳ ಗಾಢ ಮಿಶ್ರಣವೇ ಮಾಲ್ಟೋವಾ. ಮಕ್ಕಳಿಗಿದು ಎಷ್ಟೊಂದು ಹಿತಕರ... ಹಾಲಿನೊಂದಿಗೆ ಬೆರೆತಾಗ ಸಿಗುವ ಪಾನೀಯವಂತೂ ಅತ್ಯಂತ ರುಚಿಕರ. ಮಕ್ಕಳಿಗೆ ಮಾಲ್ಟೋವಾ ನೀಡಲು ಇಂದೇ ಆರಂಭಿಸಿ.

**ಪ್ರಾಕೃತಿಕವಾಗಿ ಪಕ್ವವಾದ ಗೋಧಿ ಮತ್ತು ಬಾರ್ಲಿ ಮಾಲ್ಟ್**

ಪಂಜಾಬಿನ ಶ್ರೇಷ್ಠ ಗೋಧಿ ಮತ್ತು ಬಾರ್ಲಿ, ಮಾಲ್ಟೋವಾ ಕಾರ್ಖಾನೆಯನ್ನು ಸೇರಿ, ಪೌಷ್ಟಿಕ ಮಾಲ್ಟ್ ಆಗಿ ಮಾರ್ಪಡುತ್ತವೆ. ಆವಶ್ಯಕ ಖನಿಜ ಪದಾರ್ಥಗಳು ಮತ್ತು ವಿಟಮಿನ್ B ಸಮೃದ್ಧವಾಗಿರುವ ಮಾಲ್ಟೋವಾ, ದೇಹದಲ್ಲಿ ಸುಲಭವಾಗಿ ಕರಗಬಲ್ಲ ಜೀರ್ಣಿತ ಆಹಾರವಾಗಿದೆ.

**ಶುದ್ಧ, ಆರೋಗ್ಯಕರ ಹಾಲು**

ನಮ್ಮ ಸ್ವಂತ ದುಗ್ಧ ಸಂಗ್ರಹಣಾ ಕೇಂದ್ರಗಳಿಂದ ಬಂದ ಪೌಷ್ಟಿಕ ಹಾಲು ಮಾಲ್ಟೋವಾದಲ್ಲಿ ಸೇರಿದೆ. ಎಂದೆಂದೂ ಇದು ನೂರಕ್ಕೆ ನೂರರಷ್ಟು ಶುದ್ಧ ಹಾಗೂ ಪೌಷ್ಟಿಕ.

**ರುಚಿಕರ ಕೋಕೋ ಸ್ವಾದ**

ಆಮದು ಮಾಡಲಾದ ಉತ್ತಮ ದರ್ಜೆಯ ಕೋಕೋವನ್ನೇ ನಾವು ಬಳಸುತ್ತೇವೆ. ಅಂದರೆ, ಅತ್ಯುತ್ತಮ ರುಚಿ ಮತ್ತು ಅಪಾರ ಪೌಷ್ಟಿಕತೆಯ ಭರವಸೆ ನೀಡುತ್ತೇವೆ. ಕೋಕೋ ನಿಮ್ಮಲ್ಲಿ ಹೊಸ ಚೈತನ್ಯವನ್ನು ತುಂಬಿ ಶಾರೀರಿಕ ಹಾಗೂ ಮಾನಸಿಕ ನೆಮ್ಮದಿಯನ್ನೀಯಲು ಸಹಕರಿಸುತ್ತದೆ.

**ಸಕ್ಕರೆಯಿಂದ ಸಾಮರ್ಥ್ಯ**

ಶುದ್ಧ, ಬಿಳುಪಾದ ಸಕ್ಕರೆ, ನಿಮ್ಮ ಮಗುವಿನ ಬೆಳೆಯುವ ಎಲುಬುಗಳಲ್ಲಿ ಹೆಚ್ಚಿನ ಸಾಮರ್ಥ್ಯವನ್ನು ತುಂಬಲು ಶಕ್ಯವಾಗಿದೆ.

**ವಿಟಮಿನ್‌ಗಳ ವಿಶಾಲ ಭಂಡಾರ**

ಪ್ರೋಟೀನ್, ಕಾರ್ಬೋಹೈಡ್ರೇಟ್, ವಿಟಮಿನ್ ಮತ್ತು ಖನಿಜ ಪದಾರ್ಥಗಳ ಅಪೂರ್ವ ಮಿಶ್ರಣವೇ— ಮಾಲ್ಟೋವಾ. ವಿಟಮಿನ್ A, ನಿಯಾಸಿನ್, ವಿಟಮಿನ್ $B_1$ ಮತ್ತು ವಿಟಮಿನ್ $D_2$ ಮಾಲ್ಟೋವಾದಲ್ಲಿ ವಿಪುಲವಾಗಿವೆ. ಯಾವುದೇ ಕೃತಕ ಸ್ವಾದ ಇದರಲ್ಲಿ ಸೇರಿಲ್ಲ.






JIL ಜಗತ್‌ಜಿತ್ ಇಂಡಸ್ಟ್ರೀಸ್ ಲಿಮಿಟೆಡ್ ಮಾಂಡೆ (ವಿಶ್ವ) ಆಯ್ಕೆ ಸ್ಪರ್ಧೆಯಲ್ಲಿ ಚಿನ್ನದ ಪದಕಗಳನ್ನು ಗಳಿಸಿದೆ—1981 ಮತ್ತು 1982.

## ವಿಟಮಿನ್-ಭರಿತ ಮಾಲ್ಟೋವಾ: ಆರೋಗ್ಯ, ಬಲ ಮತ್ತು ಶಕ್ತಿಗಾಗಿ

SIMOES/JIL/3/83 KAN

ಪ್ರವೇಶಧನವಿಲ್ಲ



# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

**ಗೆಲ್ಲಿರಿ ಈ ಬಹುಮಾನಗಳನ್ನು**
**ಕ್ಯಾಮೆಲ್**

1ನೆಯ ಬಹುಮಾನ ರೂ. 15/-
3 ಎರಡನೆಯ ಬಹುಮಾನಗಳು ರೂ. 10/-
10 ಮೂರನೆಯ ಬಹುಮಾನಗಳು ರೂ. 5/-
10 ಪ್ರಮಾಣ ಪತ್ರಗಳು

ಈ ಸ್ಪರ್ಧೆಯಲ್ಲಿ ಕೇವಲ 12 ವರ್ಷಗಳ ವರೆಗಿನ ವಯಸ್ಸಿನ ಮಕ್ಕಳು ಭಾಗವಹಿಸಬಹುದು. ಮೇಲೆ ಕಾಣಿಸಿದ ಚಿತ್ರಕ್ಕೆ <u>ಸಂಪೂರ್ಣವಾಗಿ</u> ಕ್ಯಾಮೆಲ್ ಬಣ್ಣಗಳಿಂದ ಬಣ್ಣ ಕೊಡಿರಿ ಮತ್ತು ಅದನ್ನು ಈ ವಿಳಾಸಕ್ಕೆ ಕಳಿಸಿರಿ :
ಪೋಸ್ಟ್ ಬಾಕ್ಸ್ ನಂ. 11501, ನರಿಮನ್ ಪಾಯಿಂಟ್ ಪೋಸ್ಟ್ ಆಫೀಸ್, ಬೊಂಬಾಯಿ 400 021.

ನಿರ್ಣಾಯಕರ ನಿರ್ಣಯವೇ ಅಂತಿಮ ನಿರ್ಣಯವಾಗುವುದು ಮತ್ತು ಎಲ್ಲರೂ ಅದಕ್ಕೆ ಬದ್ಧರಾಗುವರು. ಪತ್ರವ್ಯವಹಾರವನ್ನು ಮಾಡಲಾಗುವುದಿಲ್ಲ. ಕೂಪನನ್ನು ಇಂಗ್ಲಿಷ್‌ನಲ್ಲಿ <u>ಮಾತ್ರ</u> ತುಂಬಿರಿ.

Name:............................................................Age:..............................

Address:..............................................................................................

..........................................................................................................

ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಖು: 31–3–1984

**CONTEST NO 35**

...ಚುಕ್ಕಿ ಗೆರೆಯ ಉದ್ದಕ್ಕೂ ಕತ್ತರಿಸಿ...

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

---

ಎಷ್ಟೋ ಬುದ್ಧಿವಂತರೂ, ತಿಳುವಳಿಕೆಯುಳ್ಳವರೂ ವಿವೇಕಿಗಳೂ ಯಾವುದೋ ಒಂದು ಸಮಯದಲ್ಲಿ ಅಜ್ಞಾನಕ್ಕೂ, ಮೂಢತ್ವಕ್ಕೂ ಒಳಗಾಗಿ ಬಿಡುವುದುಂಟು. ಲೋಕಜ್ಞಾನವು ಕಡಿಮೆಯಾಗಿರುವವರಿಗೆ ಅಜ್ಞಾನವು ಯಾವುದೋ ಒಂದನ್ನು ನಂಬಿಸಿಬಿಡುತ್ತದೆ. ತಾವು ಮೂರ್ಖರಾದೆವೆಂದು ತಿಳಿದ ಮೇಲೆ ಅದು ಬೇರೆಯವರಿಗೆ ತಿಳಿಯದಂತೆ ಮಾಡಲು, ಏನೇನೋ ಕಷ್ಟನಷ್ಟಗಳಿಂದ ಹೆಣಗಾಡುತ್ತಾರೆ. ಅದಕ್ಕೆ ಕಾರಣ ಮಾನವ ಮರ್ಯಾದೆಯ ಭಯವೇ. "ಹೆಡ್ಡದಡ್ಡರು" ಎಂಬ ಈ ಸಂಚಿಕೆಯೊಳಗಿನ ಕಥೆಯಲ್ಲಿ ಅದನ್ನೆಲ್ಲ ನೋಡಬಹುದು.

## ಅಮರವಾಣಿ

ನ ಸಾ ವಿದ್ಯಾ ನ ತದ್ವಿತ್ತಂ ನ ಸಾ ಶಕ್ತಿರ್ನ ತದ್ಬಲಮ್
ಯದಿ ವಿದ್ಯಾರ್ಥಿನೇ ಶಕ್ತಿರ್ಬಲೇನೋಪಕೃತಾ ನ ಚೇತ್

ನಮಗಿರುವ ವಿದ್ಯಾ ಧನಾದಿ ಶಕ್ತಿಗಳು ಇತರರಿಗೆ ಉಪಯೋಗವಾಗದಿದ್ದರೆ, ಅವು ನಿಜವಾದ ವಿದ್ಯಾವಿತ್ತ ಬಲಗಳೇ ಅಲ್ಲ.

---

ಸಂಪುಟ: ೨೭ ಮಾರ್ಚಿ '೯೦ ಸಂಚಿಕೆ: ೯.

ಬಿಡಿ ಪ್ರತಿ ರೂ. ೩-೦೦ :: ವಾರ್ಷಿಕ ಚಂದಾ ರೂ. ೩೬-೦೦



# ಚಂದಮಾಮನ ಹರಟೆ

## ಹಾರುವ ವಿಚಿತ್ರ ಪ್ರಾಣಿಗಳು



ಕೆಲವು ಕೋಟಿ ವರ್ಷಗಳ ಹಿಂದೆ ಈ ಭೂಮಿಯ ಮೇಲೆ 'ಟೆರೋಸಾರ್ಸ್' ಎಂಬ ತೆವಳುವ ವಿಚಿತ್ರ ಪ್ರಾಣಿಗಳು ಇದ್ದುವು. ಹದಿನಾರು ಮೀಟರು ಉದ್ದವಿರುವ ರೆಕ್ಕೆಗಳಿಂದ ತೆವಳುತ್ತ ಹಾಗೆಯೇ ಗಾಳಿಯಲ್ಲಿ ತೇಲಿಹೋಗುವ ಈ ಪ್ರಾಣಿಗಳು, ಲಕ್ಷಗಟ್ಟಲೆ ವರ್ಷ ಬದುಕಿದ್ದುವೆಂದು, ಪೂರ್ವಟೆಕ್ಸಾಸ್‌ನಲ್ಲಿ ಲಭಿಸಿದ ಶಿಲಾವಶೇಷಗಳಿಂದ ಹೊರಬಿದ್ದಿದೆ.

## ವ್ಯೋಮ ಮಂಡಲಕ್ಕೆ ವಿನೋದ ಯಾತ್ರೆ



ಅಮೆರಿಕಾದ 'ನಾಸಾ' ರಾಕ್ವೆಲ್ ಅಂತರ್ದೇಶೀಯ ವಿಜ್ಞಾನ ಸಂಸ್ಥೆಗೆ ಸೇರಿದ ಶಾಸ್ತ್ರವೇತ್ತರು ಕೆಲವರು ಕೂಡಿ ಒಂದು ವ್ಯೋಮ ನೌಕೆಯನ್ನು ರೂಪಿಸುತ್ತಿದ್ದಾರೆ. ಇದು ಎಪ್ಪತ್ನಾಲ್ಕು ಜನರನ್ನು 'ವ್ಯೋಮಾವರಣ'ಕ್ಕೆ ಕೊಂಡೊಯ್ಯಬಲ್ಲುದು. ೧೯೯೦ ನೇ ವರ್ಷದ ಮೇಲೆ ಮೊದಲನೇ ಗುಂಪು ಹೊರಡಬಹುದೆಂದು ಅಭಿಜ್ಞರ ಗಣನೆಯಿಂದ ತಿಳಿದು ಬರುತ್ತದೆ. ಈ ವ್ಯೋಮ ನೌಕಾಯಾನದಲ್ಲಿ ಒಬ್ಬ ಪ್ರಯಾಣಿಕನಿಗೆ ತಗಲುವ ಖರ್ಚು ಇಪ್ಪತ್ತು ಲಕ್ಷ ಡಾಲರುಗಳನ್ನು ದಾಟುತ್ತದೆಂದು ಅಂದಾಜು !

## ಕನ್ನಡಿಯಂಥ ಚಿನ್ನ



ನ್ಯೂ ಮೆಕ್ಸಿಕೋದ, ಲಾಸ್ ಅಲಮಸ್ ರಾಷ್ಟ್ರೀಯ ಪ್ರಯೋಗ ಶಾಲೆಯಲ್ಲಿ ವಿಜ್ಞಾನ ವೇತ್ತರು ಚಿನ್ನದ ತುಂಡುಗಳನ್ನು ತೆಗೆದುಕೊಂಡು, ಆಚೆಗಿರುವ ವಸ್ತುಗಳು ಕಾಣುವ ಹಾಗೆ ತೆಳ್ಳಗಿನ ತಗಡಾಗಿ ಹರಡಿಸಿದ್ದಾರೆ. ಇದರ ದಪ್ಪವು ಅಂಗುಲದ ಹತ್ತು ಲಕ್ಷಗಳಲ್ಲಿ ಒಂದಂಶಕ್ಕೂ ಕಡಿಮೆ !

## ನಿಮಗೆ ಗೊತ್ತೇ?

೧. ಕಲಕತ್ತಾ ನಗರವನ್ನು ನಿರ್ಮಿಸಿದವರು ಯಾರು ? ಯಾವಾಗ ?

೨. ಕ್ರಿಸ್ತವ ಮತವನ್ನು ಕುರಿತು ತಿಳಿದುಕೊಳ್ಳಲು ಆಸಕ್ತಿ ತೋರಿಸಿದ ಮೊಗಲ್ ಚಕ್ರವರ್ತಿ ಯಾರೆಂದು ನಿಮಗೆ ಗೊತ್ತೇ ?

೩. ಅಲೆಗ್ಸಾಂಡರನ ಭಾರತ ದಂಡಯಾತ್ರೆಯನ್ನು ಕುರಿತು ಬರೆದ ಚರಿತ್ರಕಾರನು ಯಾರು ?

೪. ಹನ್ನೊಂದನೇ ಶತಮಾನದಲ್ಲಿ ಭಾರತದೇಶದ ಭೂಭಾಗವನ್ನು ಸ್ವಲ್ಪ ಆಕ್ರಮಿಸಿಕೊಂಡ ವಿದೇಶ ರಾಜನು ಯಾರೆಂದು ನಿಮಗೆ ತಿಳಿದಿದೆಯೆ ?

೫. ಭಾರತದೇಶದಲ್ಲಿ ಆಂಗ್ಲ ವಿದ್ಯಾಬೋಧನೆಯನ್ನು ಪ್ರಾರಂಭಿಸಿದವರು ಯಾರು ?

(ಉತ್ತರ ೬೪ ನೇ ಪುಟದಲ್ಲಿ)



# ಪರೋಪಕಾರಿ

ನಾರಾಯಣ ಕೊಟವೆಂಬ ಗ್ರಾಮದಲ್ಲಿ ರಮಣಯ್ಯ ನೆಂಬೊಬ್ಬ ಪರೋಪಕಾರ ಬುದ್ಧಿಯುಳ್ಳವನಿದ್ದನು. ಒಂದು ಸಾರಿ ಭಾರಿ ಸುಳಿಗಾಳಿಯೂ ಮಳೆಯೂ ಹೊಡೆದು ಅನೇಕ ಮರಗಳೂ ಮನೆಗಳೂ ಉರುಳಿದುವು. ಮಾಡುಗಳು ಹಾರಿದುವು. ಬಡವರು ನಿಲ್ಲಲು ನೆಲೆಯಿಲ್ಲದೆ ಪೇಚಾಡಿದಾಗ "ರಮಣಯ್ಯ ಮನೆ ಮನೆ ತಿರುಗಿ ವಂತಿಗೆ ವಸೂಲು ಮಾಡಿ ಕಷ್ಟನಷ್ಟಗಳಲ್ಲಿರುವವರಿಗೆ ಗುಡಿಸಲುಗಳನ್ನು ಕಟ್ಟಿಸಿ ಕೊಟ್ಟನು. ಇದಕ್ಕೆ ಗ್ರಾಮಗಳಲ್ಲಿ ಸ್ವಲ್ಪಮಟ್ಟಿಗೆ ಸ್ಥಿತಿವಂತರಾದವರು ಕೂಡಾ ಯಥಾಶಕ್ತಿ ವಂತಿಗೆ ಹಾಕಿದರು. ಆದರೆ ಧನಗುಪ್ತನೆಂಬ ಸಾಹುಕಾರನು ಮಾತ್ರ ರಮಣಯ್ಯನಿಗೆ ಒಂದು ಚಿಕ್ಕಾಸು ಕೂಡಾ ಕೊಡಲಿಲ್ಲ.

ಕಡೆಗೆ ರಮಣಯ್ಯನು ತನಗೆ ದೊಡ್ಡದಾಗಿ ವಂತಿಗೆ ಕೊಟ್ಟವರ ಹೆಸರುಗಳನ್ನು ಹೇಳುತ್ತಾ ಹೋಗುವಾಗ, ಧನಗುಪ್ತನು ತಡೆದು, "ಏತಕ್ಕಯ್ಯಾ ಸುಮ್ಮನೆ ಕಂಠಶೋಷ ಮಾಡಿಕೊಳ್ಳುತ್ತೀ? ಗುಡಿಸಲು ಮನೆ ಕಳೆದುಕೊಂಡವರಾರೂ ಬಂದು ಕೈಚಾಚಿ ರೋದನೆಮಾಡಿ ಬೇಡಲಿಲ್ಲ. ಏಕೆ ಗೊತ್ತೇ? ಹಾಗೆ ಬೇಡುವುದು ಯಾರಿಗೂ ಇಷ್ಟವಿಲ್ಲ. ಬೇಡಿ ತಿನ್ನುವ ಬುದ್ಧಿಯುಳ್ಳವರೇ ನಿನ್ನ ಹಾಗೆ ವಂತಿಗೆ, ಚಂದಾ ಎಂದು ಕಾಟ ಕೊಡುತ್ತಾರೆ. ಇದರಲ್ಲಿ ಅಷ್ಟೋ ಇಷ್ಟೋ ಉಳಿಸಿಕೊಳ್ಳಬಹುದೆಂದು ನೀನು ಆಸೆಪಡುವ ಸಂಗತಿ ನನಗೆ ಗೊತ್ತಿದೆ. ನಾನು ನಿನ್ನಂಥವರಿಗೆ ಎಂದಿಗೂ ಸಹಕರಿಸುವುದಿಲ್ಲ" ಎಂದನು.

ಗ್ರಾಮಗಳಲ್ಲಿ ಅನೇಕರು ರಮಣಯ್ಯನನ್ನು ದೇವರೆಂದು ಹೊಗಳುತ್ತಿದ್ದರು. ಆದರೂ ಅವನಿಗೆ ತೃಪ್ತಿಯುಂಟಾಗಲಿಲ್ಲ. ತನ್ನನ್ನು ಧನಗುಪ್ತನು ಬಾಯಿಗೆ ಬಂದ ಹಾಗೆ ಹೀಯಾಳಿಸಿದನಾದುದರಿಂದ, ಅವನಿಗೆ ಸರಿಯಾದ ಬುದ್ಧಿ ಕಲಿಸಬೇಕೆಂದು ತಾಪತ್ರಯಪಡುತ್ತಿದ್ದನು.

ಇದ್ದಕ್ಕಿದ್ದ ಹಾಗೆ ಒಂದು ದಿನ ರಮಣಯ್ಯ ಧನಗುಪ್ತನ ಬಳಿಗೆ ಹೋಗಿ, "ನೀವು ಹೇಳುವ ಹಾಗಿದ್ದರೆ ಎಲ್ಲಾ ಗ್ರಾಮದವರೂ ನನ್ನನ್ನು ಹೊಗಳುತ್ತಿದ್ದರೇ? ಆ ಹೊಗಳಿಕೆ ನಿಮ್ಮ ಕಿವಿಗೆ ಕೇಳುವುದಿಲ್ಲವೆ? ಸ್ಥಿತಿಗತಿ ಇದ್ದವರಲ್ಲಿ ನಿಮ್ಮೊಬ್ಬರ ಹೊರತು ಎಲ್ಲರೂ ತುಫಾನು ವಂತಿಗೆ ಕೊಟ್ಟಿದ್ದಾರೆ. ನೀವೂ ಏನಾ

ಜಿ. ರಾಮಲಕ್ಷ್ಮಿ



ದರೂ ಕೊಟ್ಟಿದ್ದರೆ ನಿಮಗೂ ತೃಪ್ತಿಯಾಗುತ್ತಿತ್ತು" ಎಂದನು.

ಧನಗುಪ್ತನು ಕೋಪದಿಂದ, "ನನ್ನ ಹತ್ತಿರ ಎಷ್ಟೋ ಜನರು ಸಾಲ ತೆಗೆದುಕೊಂಡು ದಿನಾ ನನ್ನನ್ನು ಹೊಗಳಿ ಹೋಗುತ್ತಾ ಇದ್ದಾರೆ. ಹಣವಿರುವಷ್ಟು ಕಾಲ ನಾನು ಬೇರೆಯವರ ಹೊಗಳಿಕೆಗಾಗಿ ಏನೇನೋ ಮಾಡಬೇಕಾದ ಅಗತ್ಯವೇನಿಲ್ಲ. ಗತಿಗೋತ್ರವಿಲ್ಲದ ನಿನ್ನಂಥ ಕೈಲಾಗದವರೇ ಪರೋಪಕಾರವೆಂದು ಕಚ್ಚೆಕಟ್ಟಿ ಹೊರಡುತ್ತಾರೆ. ಇತರರು ಕೊಡುವ ಹಣದಿಂದ ಪರೋಪಕಾರ ಮಾಡಿ ಹೊಗಳಿಕೆ ಸಂಪಾದಿಸುತ್ತಾರೆ. ಯಾರಿಗೆ ಬೇಕು ಅದು ?" ಎಂದು ರಮಣಯ್ಯನನ್ನು ಅವಮಾನ ಪಡಿಸಿ ಕಳುಹಿಸಿದನು.

ರಮಣಯ್ಯನಿಗೆ ವಿಪರೀತ ಕೋಪ ಬಂತು. ಹೀಗೆಲ್ಲಾ ನಡೆಯಿತೆಂಬುದನ್ನು ಕೇಳಿ ಅವನ ತಂದೆ, "ಸುಮ್ಮನಿರಪ್ಪ, ಆ ಧನಗುಪ್ತನ ಬಾಯಿ ಒಳ್ಳೆಯದಲ್ಲ. ಅಂಥವನಿಂದ ದೂರವಿರುವುದೇ ಒಳ್ಳೆಯದು. ನೀನು ಹತ್ತು ಮಂದಿಗೆ ಸಹಾಯ ಮಾಡಬೇಕೆಂದಿರುವೆಯಾದರೆ ನಾನೇನೂ ಬೇಡೆನ್ನುವುದಿಲ್ಲ, ಮಾಡು. ಮಾಡು. ಆದರೆ ಧನಗುಪ್ತನ ವಿಷಯವನ್ನು ಯೋಚಿಸಿಕೊಂಡಿರಬೇಡ" ಎಂದನು.

ತಂದೆಯ ಬುದ್ಧಿಮತಿ ರಮಣಯ್ಯನ ರೋಷಕ್ಕೆ ಶಮನವೆನಿಸಲಿಲ್ಲ. ಅವನು ತನ್ನ ಸ್ನೇಹಿತರೊಂದಿಗೆ ನಡೆದ ಅವಮಾನವನ್ನು ಹೇಳಿಕೊಂಡನು. ಅವರು ಕೂಡಾ ರಮಣಯ್ಯನಿಗೆ ಸಮಾಧಾನ ಹೇಳುತ್ತ, "ಆ ಧನಗುಪ್ತನೊಬ್ಬ ಹಾಗೆಂದ ಮಾತ್ರಕ್ಕೆ ನೀನು ಕೈಲಾಗದವನಾಗಿಬಿಡುವೆಯಾ ? ಅಂಥಾ ಮಾತನ್ನೆಲ್ಲ ಆಗಾಗಲೇ ಮರೆತುಬಿಡು" ಎಂದರು.

ಇದರಲ್ಲಿ ಆಶ್ಚರ್ಯವೇನೆಂದರೆ, ರಮಣಯ್ಯನಿಂದ ಉಪಕಾರ ಹೊಂದಿದವರು ಕೂಡಾ "ನೀವು ದೇವರಂಥವರಯ್ಯ. ಆದ್ದರಿಂದಲೇ ಆಗದವರಿಂದ ಕೆಟ್ಟ ಮಾತು ಕೇಳಿಸಿಕೊಂಡಾದರೂ ನಮ್ಮಂಥವರಿಗೆ ಒಳ್ಳೇದಾಗುವಂತೆ ಮಾಡಿದಿರಿ" ಎಂದು ಅವನನ್ನು ಮೆಚ್ಚಿಕೊಳ್ಳುವರೇ ಹೊರತು, ಧನಗುಪ್ತನ ಪ್ರವರ್ತನೆಯನ್ನು ಯಾರೂ ಖಂಡಿಸುವ ಗೋಜಿಗೆ ಹೋಗಲಿಲ್ಲ.

ಈ ರಗಳೆಯನ್ನು ಕೇಳಿದ ಊರೊಳಗಿನ ಕೆಲ ಮಂದಿ ಹಿರಿಯರು ರಮಣಯ್ಯನನ್ನು ಮೈದಾನದ ಮಾತಿನ ಕಟ್ಟೆಯಲ್ಲಿ ಸಂಧಿಸಿ, "ನೋಡಪ್ಪಾ, ಧನಗುಪ್ತನದು ದುಡುಕಿನ ಧೋರಣೆ. ಆಗದ್ದಕ್ಕೆ ಹೋಗದ್ದಕ್ಕೆಲ್ಲ ಕೆಟ್ಟ ಮಾತು ಉದುರಿಸಿಕೊಂಡಿರುತ್ತಾನೆ. ಅದಕ್ಕಾಗಿ ನೀನೇನೂ ಚಿಂತಿಸಬಾರದು. ನಾಯಿ ಬೊಗಳಿದರೆ ದೇವಲೋಕ ಹಾಳಾಗುವುದೇನು ? ಅವನಿಗೆ ಸ್ವಲ್ಪ ನಾಟುವ ಹಾಗೆ ಹೇಳಬೇಕೆಂದು ನಮಗೂ ಇದೆ. ನಮ್ಮನ್ನು ಕೂಡಾ ಅವನು ಹುಳದ ಹಾಗೆ ನೋಡುತ್ತಾನೆ" ಎಂದು ಸಮಾಧಾನ ಹೇಳಿದರು.

ಇಷ್ಟು ನಡೆದ ಮೇಲೆ ರಮಣಯ್ಯ ಧನಗುಪ್ತ ನನ್ನು ಕುರಿತು ಇನ್ನಿಷ್ಟು ಆಳವಾಗಿ ಆಲೋಚನೆ ಮಾಡಿದನು. ಧನಗುಪ್ತನಲ್ಲಿ ಬೇಕಾದಷ್ಟು ಧನವಿದೆ. ಗ್ರಾಮಗಳಲ್ಲಿ ಎಲ್ಲರಿಗೂ ಅವನೊಂದಿಗೆ ಅಷ್ಟೋ ಇಷ್ಟೋ ಸಂಬಂಧವಿದೆ. ಆದುದರಿಂದಲೇ ಧನ ಗುಪ್ತನ ಮೇಲೆ ತಪ್ಪು ಹೇಳಲು ಎಲ್ಲರೂ ಭಯ ಪಡುತ್ತಾರೆ !

ತನ್ನ ರೋಷ ತಣಿಯುವ ಹಾಗೆ ಧನಗುಪ್ತನನ್ನು ಅವಮಾನ ಪಡಿಸುವುದು ಹೇಗೆಂದು ರಮಣಯ್ಯನು ಏನೇನೋ ದಾರಿ ಯೋಚಿಸಿಕೊಂಡಿದ್ದನು. ಆಗ ಒಂದು ಒಳ್ಳೆಯ ಅವಕಾಶ ಬಂದಿತು.

ದೂರದ ಊರಿನಿಂದ ಒಬ್ಬ ದೊಡ್ಡ ಮಲ್ಲನು ಪರೋಪಕಾರಿ ರಮಣಯ್ಯನ ಮನೆಗೆ ಬಂದು, "ಮಲ್ಲವಿದ್ಯೆಯಲ್ಲಿ ನಾನು ಚೆನ್ನಾಗಿ ಪಳಗಿದವನು. ಹೊಸ ಹೊಸ ಪಟ್ಟುಗಳನ್ನು ಕಲಿತಿದ್ದೇನೆ. ಅದನ್ನೆಲ್ಲ ಪ್ರದರ್ಶಿಸಿ ನಿಮ್ಮ ಗ್ರಾಮಸ್ಥರನ್ನು ವಿನೋದಗೊಳಿಸ ಬೇಕೆಂದಿದ್ದೇನೆ. ಎಲ್ಲರೂ ಕೂಡಿ ನನಗೆ ನೂರು ವರಹಗಳನ್ನು ಕೊಟ್ಟರೆ ಸಾಕು, ಸಂತೋಷಿಸುತ್ತೇನೆ. ನೀವು ನನಗೆ ಸಹಾಯ ಮಾಡಬೇಕು" ಎಂದನು.

ಧನಗುಪ್ತನ ಮೇಲೆ ತನಗಿರುವ ಹಗೆಯನ್ನು ತೀರಿಸಲು ಇದೇ ಒಳ್ಳೆಯ ಅವಕಾಶ ಎಂದುಕೊಂಡು ರಮಣಯ್ಯನು, "ಇಂತಹ ಕೆಲಸಗಳು ನನ್ನಿಂದಾಗು ವಂಥಾದ್ದಲ್ಲ. ನಿನಗೆ ತಕ್ಕ ದಾರಿ ಮಾತ್ರ ಹೇಳಬಲ್ಲೆ. ಈ ಗ್ರಾಮದಲ್ಲಿ ಧನಗುಪ್ತರೆಂಬ ದೊಡ್ಡ ಶ್ರೀಮಂತ ರೊಬ್ಬರಿದ್ದಾರೆ. ಅವರಿಗೆ ಮಲ್ಲವಿದ್ಯೆಯ ಮೇಲೆ ಬಹಳ ಅಭಿಮಾನವಿದೆ. ಜಟ್ಟೀ ಕಾಳಗವೆಂದರೆ ತುಂಬಾ ಇಷ್ಟ. ಅಲ್ಲಿಗೆ ಹೋಗಿ ಕೇಳಿಕೊಂಡರೆ ಖಂಡಿತ ಸಹಾಯ ಮಾಡುತ್ತಾರೆ" ಎಂದನು.

ಮಲ್ಲನು ಧನಗುಪ್ತನ ಮನೆಗೆ ಹೋಗಿ ತನ್ನ ಪ್ರತಿಭೆಯನ್ನು ಕುರಿತು ಹೇಳಿಕೊಂಡು, "ತಮಗೆ ಮಲ್ಲವಿದ್ಯೆಯ ಮೇಲೆ ಬಹಳ ಇಷ್ಟವೆಂದು ಕೇಳಿದೆನು, ನನ್ನ ವಿನೋದ ಪ್ರದರ್ಶನಕ್ಕೆ ಏರ್ಪಾಡು ಮಾಡಿಸಿ, ಬಹುಮಾನವಾಗಿ ನೂರು ವರಹ ಕೊಡಿಸ ಬೇಕೆಂದು ಪ್ರಾರ್ಥನೆ" ಎಂದನು.



ಮಲ್ಲನು ಹೇಳಿದುದನ್ನು ಕೇಳಿ ಧನಗುಪ್ತನಿಗೆ ಬಹಳ ಕೋಪ ಬಂದಿತು. ಅವನು ಮಲ್ಲನನ್ನು ಕೆಟ್ಟ ಹುಳವನ್ನು ನೋಡಿದ ಹಾಗೆ ನೋಡುತ್ತ, "ಕೋಣನ ಹಾಗೆ ದೇಹ ಬೆಳೆಸಿಕೊಂಡು ತಿಂಡಿಗಾಗಿ ಇನ್ನೊಬ್ಬರ ಮೇಲೆ ಆಧಾರಪಡುವವರನ್ನು ಕಂಡರೇ ನನಗಾಗದು. ಅದರಲ್ಲೂ ಸುಮ್ಮನೆ ಬಡಬಡ ಗುದ್ದಾಡಿಕೊಳ್ಳುವ ಮಲ್ಲವಿದ್ಯೆಯಂತೆ! ಅದೊಂದು ವಿದ್ಯೆಯಾ? ಬಂದ ದಾರಿ ಹಿಡಿದು ಹೋಗಿಬಿಡು!" ಎಂದು ಮಲ್ಲನನ್ನು ಅವಮಾನಪಡಿಸಿದನು.

ಮಲ್ಲನು ಹಲ್ಲು ಕಡಿಯುತ್ತ, ರಮಣಯ್ಯನ ಹತ್ತಿರ ಬಂದು, "ಏನಯ್ಯಾ ಇದು? ನನಗೇಕೆ ಸುಳ್ಳು ಸುಳ್ಳೇ ಹೇಳಿದಿರಿ? ಧನಗುಪ್ತನಿಗೆ ಮಲ್ಲ ವಿದ್ಯೆಯ ಮೇಲೆ ಪರಮ ಅಸಹ್ಯವೆಂದು ಬಾಯಿ ಬಿಟ್ಟೇ ಹೇಳಿದ! ನನ್ನ ಜೀವಿತದಲ್ಲಿ ನಿಮ್ಮಿಂದಾಗಿ ನಾನು ಹೀಗೆ ಅವಮಾನಪಡಬೇಕಾಯಿತು" ಎಂದನು.

"ಹಾಗೇನು! ಎಲಯೆಲಾ! ಆ ಧನಗುಪ್ತರು ಹಾಗೆಲ್ಲಾ ಹೇಳುತ್ತಿದ್ದರೆ ನೀನು ಕೇಳುತ್ತಾ ಸುಮ್ಮ ನಿದ್ದೆಯಾ? ನಿನ್ನ ಮಲ್ಲವಿದ್ಯೆ ಸ್ವಲ್ಪ ಅವರ ಮೇಲೆ ತೋರಿಸಬೇಕಿತ್ತು! ಅದನ್ನು ಪರೀಕ್ಷಿಸಲಿಕ್ಕೇ ಅವರು ಹಾಗೆ ಹೇಳಿದ್ದು!" ಎಂದನು ರಮಣಯ್ಯ ಮಲ್ಲನಿಗೆ ಇನ್ನಿಷ್ಟು ರೋಷವೇಳುವ ಹಾಗೆ.

"ಹೌದು, ತೋರಿಸುತ್ತೇನೆ ನನ್ನ ವಿದ್ಯೆ!" ಎಂದು ಮಲ್ಲನು ರಮಣಯ್ಯನ ಶರೀರದ ಮೇಲೆ ನಾಲ್ಕೈದು ಗುದ್ದು ಹಾಕಿದನು. ರಮಣಯ್ಯ ಬಿದ್ದು ಬಿದ್ದೆದ್ದು ನೋವಿನಿಂದ, "ಅಮ್ಮಮ್ಮ! ಅಪ್ಪಪ್ಪ!" ಎಂದು ನರಳುತ್ತ, "ಆ ದುಷ್ಟ ನಿನ್ನನ್ನು ಬೈದರೆ ನನ್ನನ್ನೇಕೆ ಗುದ್ದುತ್ತೀ?" ಎಂದನು.

"ನಿಮಗೆ ಅವನ ಮೇಲೆ ಏನೋ ಹಗೆ ಇದ್ದಿರಬೇಕೆಂದು ಈಗ ನನಗೆ ಅರ್ಥವಾಯಿತು. ನನ್ನಿಂದ ಅವನನ್ನು ಹೊಡೆಸಬೇಕೆಂಬುದು ನಿಮ್ಮ ಎತ್ತುಗಡೆ! ನಾನು ಸ್ವತಂತ್ರ ಮಲ್ಲನೇ ಹೊರತು ನಿಮ್ಮ ಆಳಲ್ಲ. ಧನಗುಪ್ತನು ಹಾಗೆ ಬೈಯಲು ನೀವೇ ಕಾರಣ. ಅದಕ್ಕೇ ನಿಮ್ಮನ್ನು ಗುದ್ದಿದೆ!" ಎಂದು ಹೇಳಿ ಮಲ್ಲನು ಹೊರಟು ಹೋದನು.

ಇದನ್ನೆಲ್ಲಾ ತಿಳಿದು ರಮಣಯ್ಯನ ತಂದೆ ಮಗನಿಗೆ ಬುದ್ಧಿ ಹೇಳುತ್ತ, "ಆ ಧನಗುಪ್ತ ಜೇನುಹುಟ್ಟಿನಂಥವನು. ಬೇಕಂತ ಅದನ್ನು ಕದಲಿಸಿ ಬಾಧೆ ತಂದುಕೊಂಡ ಹಾಗೆ ಮಾಡಿದೆಯಲ್ಲೋ ಶುಂಠಾ! ಇನ್ನೆಂದಿಗೂ ಅವನ ತಂಟೆಗೆ ಹೋಗಬೇಡ. ನಿಜವಾದ ಪರೋಪಕಾರಿಯಾದವನು ಬೈಗಳಿಗೂ ಮೆಚ್ಚುಗೆಗಳಿಗೂ ಚಂಚಲನಾಗುವುದಿಲ್ಲ" ಎಂದನು.

ಆಮೇಲೆಯಷ್ಟೇ ರಮಣಯ್ಯನಲ್ಲಿ ಧನಗುಪ್ತನ ಕೀಟ ಬಿಟ್ಟುಹೋಯಿತು.





# ಮಾನವನಂತಹಗಿಳಿ

**ಬೇ**ತಾಳವು ಶವದ ಬಾಯಿಯಿಂದ ಹೊರಡಿಸುವ ಕಥೆಯನ್ನು ಮತ್ತೆ ಕೇಳಬೇಕೆಂಬ ಕುತೂಹಲವು ತ್ರಿವಿಕ್ರಮನಿಗೇ ಬಂದಿತೇನೋ ಎಂಬಂತೆ, ಅವನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡಿಕೊಂಡಿದ್ದ ಶವವನ್ನು ಕೆಳಗಿಳಿಸಿ, ತನ್ನ ಹೆಗಲಿನಲ್ಲಿ ಹೊತ್ತುಕೊಂಡು ಮೌನಗಂಭೀರ ಮುದ್ರೆಯಲ್ಲಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವವು ಬೇತಾಳದ ಪ್ರಭಾವದಿಂದ ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ಇಷ್ಟೊಂದು ನಡುರಾತ್ರಿಯಲ್ಲಿ ನನ್ನನ್ನು ಹೊತ್ತುಕೊಂಡು ಭಯಂಕರವಾದ ಸ್ಮಶಾನದ ಕಡೆಗೆ ಹೋಗುವೆಯಲ್ಲಾ? ಈ ನಿನ್ನ ದುಡಿಮೆಯನ್ನು ನೋಡುವಾಗ ನನಗೆ ಹೃದಯ ಕರಗುತ್ತದೆ. ಹಿಡಿದ ಕಾರ್ಯ ಸಾಧಿಸಬೇಕೆಂಬ ನಿನ್ನ ಹಟ ಮೆಚ್ಚತಕ್ಕದ್ದೇ ನಿಜ. ಆದರೆ ಅದು ನಿನಗಾಗಿಯೋ ಅಲ್ಲ ಪರರಿಗಾಗಿಯೋ ಎಂಬ ಸಂದೇಹ ನನ್ನನ್ನು ಬಾಧಿಸುತ್ತಿದೆ. ಒಂದು ವೇಳೆ ನಿನ್ನಂತಹ ಕಠೋರದೀಕ್ಷೆ ಹಿಡಿದವರಿಗಾಗಿ ಮಾತ್ರ ಈ ಶ್ರಮವಾದರೆ ನೀನು ಬಹಳ ಜಾಗರೂಕನಾಗಿರಬೇಕು. ಒಂದೊಂದು ಸಾರಿ ಸಹಾಯ

## ಬೇತಾಳ ಕಥೆಗಳು?...



ಪಡೆದವರಿಂದ ಸನ್ಮಾನ ಪಡೆಯಲಾಗದೆ, ಅವಮಾನಕ್ಕೆ ಒಳಗಾಗಬೇಕಾಗಿ, ಪಶ್ಚಾತ್ತಾಪವಾಗಲೂ ಬಹುದು. ಇದಕ್ಕೆ ಉದಾಹರಣೆಯಾಗಿ ನಿನಗೆ ಮಾನವನಂತಹ ಗಿಳಿಯ ಕಥೆಯನ್ನು ಹೇಳುತ್ತೇನೆ. ನಡೆಯುವ ಕಷ್ಟ ತಿಳಿಯದಂತೆ ಕೇಳು" ಎಂದು ಕಥೆ ಹೇಳಲು ಪ್ರಾರಂಭಿಸಿತು :

ಧಾರಾ ನಗರದಲ್ಲಿ ವಾಸವಾಗಿದ್ದ ಸುದರ್ಶನನಿಗೆ ಸುಂದರಿಯೂ ವಿನಯಶೀಲೆಯೂ ಆದ ಹೆಂಡತಿ ಯಿದ್ದಳು. ಬುದ್ಧಿವಂತರಾದ ಮಕ್ಕಳೂ ಇದ್ದರು. ಅನುಭವಿಸ ಬೇಕಾಗುವಷ್ಟು ದೊಡ್ಡ ಆಸ್ತಿಯೂ ಅವನಿಗಿತ್ತು. ಹೀಗೆ ಎಲ್ಲವೂ ಇದ್ದರೂ ಯಾವುದೋ ತಿಳಿಯದ ಕಾರಣದಿಂದ ಅವನು ಯಾವಾಗಲೂ ಚಿಂತೆಯಿಂದ ದಿಗಿಲು ಬಡಿದ ಮುಖದವನಾಗಿಯೇ ಕಾಣುತ್ತಿದ್ದನು. ಅವನನ್ನು ಸಂತೋಷಪಡಿಸಲು ಯಾರು ಯಾರು ಏನೇನು ಪ್ರಯತ್ನ ಮಾಡಿದರೂ ಅವನ ಮನಸ್ಸಿಗೆ ಉಲ್ಲಾಸವಾಗುತ್ತಿದ್ದಿಲ್ಲ. ಕಡೆಗೆ ಅವನ ಹಣೆ ಬರಹವೇ ಹಾಗೇನೋ ಎಂದು ಎಲ್ಲರಿಗೂ ತೋರುವಂತಾಯಿತು.

ಒಂದು ದಿನ ಚಿಕ್ಕದೊಂದು ಪಂಜರದೊಂದಿಗೆ ಒಬ್ಬ ಮನುಷ್ಯನು ಸುದರ್ಶನನ ಬಳಿಗೆ ಬಂದನು. ಪಂಜರದಲ್ಲಿ ಅತ್ಯಂತ ಸುಂದರವಾದೊಂದು ಗಿಳಿ ಇದ್ದಿತು. ಆ ಮನುಷ್ಯನು ಸುದರ್ಶನನೊಂದಿಗೆ, "ಅಯ್ಯಾ, ನಿಮ್ಮ ಸಂಗತಿ ತಿಳಿದು ಬಂದಿದ್ದೇನೆ. ಇದು ಮಾತಾಡಲು ಕಲಿತಿರುವ ಗಿಳಿ. ಇಂತಹ ಗಿಳಿ ಬೇರೆಲ್ಲಿಯೂ ಇರಲಾರದು. ತಮ್ಮ ಮನಸ್ಸಿಗೆ ಉಲ್ಲಾಸ ಬರಿಸುವಂತಹ ಎಷ್ಟೋ ಕಥೆಗಳನ್ನು ಇದು ಹೇಳುತ್ತದೆ. ಸಾವಿರ ವರಹ ಕೊಟ್ಟರೆ ಇದನ್ನು ನಿಮಗೆ ಕೊಡುತ್ತೇನೆ" ಎಂದನು.

ಸುದರ್ಶನನು ಸ್ವಲ್ಪ ಹೊತ್ತು ಗಿಳಿಯನ್ನು ಪರೀಕ್ಷಿಸಿ ನೋಡಿದನು. ಅದರ ಮುದ್ದು ಮುದ್ದಾದ ಮಾತುಗಳನ್ನು ಕೇಳುತ್ತಾ ಇದ್ದರೆ ಅವನಿಗೆ ಬಹಳ ಹರ್ಷವಾಗುವುದು ತಿಳಿಯಿತು. ಮಾರುವವನು ಹೇಳಿದುದರಲ್ಲಿ ಅತಿಶಯೋಕ್ತಿ ಏನಿಲ್ಲವೆಂದು ಅನಿಸಿತು. ಕೂಡಲೇ ಸಾವಿರ ವರಹಗಳನ್ನು ಕೊಟ್ಟು ಅವನು ಆ ಗಿಳಿಯನ್ನು ಕೊಂಡುಕೊಂಡನು.

ಮೊದಮೊದಲು ಮನೆಯಲ್ಲಿದ್ದವರೆಲ್ಲಾ ಆ ಗಿಳಿಯ ಮೇಲೆ ಇಷ್ಟವಾಗಿದ್ದರು. ಆದರೆ ಸುದರ್ಶನನು ದಿನ ವಿಡೀ ಗಿಳಿಯೊಂದಿಗಿರುತ್ತ, ಅದರ ಧ್ಯಾನದಲ್ಲೇ ಮಗ್ನ ನಾಗಿರುವುದನ್ನು ನೋಡಿ, ಉಳಿದವರಿಗೆಲ್ಲಾ ಗಿಳಿಯ ಮೇಲೆ ಅಸೂಯೆಯುಂಟಾಯಿತು. ಸುದರ್ಶನನು ಗಿಳಿಯ ಮೋಹದಲ್ಲಿ ಬಿದ್ದು ಹೆಂಡತಿಯೊಡನೆ ಮಾತಾಡುವುದನ್ನು ಕಡಿಮೆ ಮಾಡಿದನು. ವ್ಯಾಪಾರ ವಿಷಯಗಳನ್ನೆಲ್ಲ ಮಕ್ಕಳಿಗೆ ಬಿಟ್ಟುಕೊಟ್ಟನು. ಗಿಳಿಯೇ ಅವನ ಪ್ರಪಂಚವಾಯಿತು.

ಹೀಗೆ ಸದಾಕಾಲವೂ ಗಿಳಿಯೊಂದಿಗಿರುವುದು ಚೆನ್ನಾಗಿಲ್ಲವೆಂದು ಯಾರಾದರೂ ಹೇಳಿದರೆ, "ಈ ಗಿಳಿಯ ಮಹಿಮೆ ನಿಮಗೇನು ಗೊತ್ತಿದೆ? ನನ್ನ ಮನಸ್ಸಿನ



ಚಿಂತೆಯನ್ನು ಈ ಗಿಳಿ ಮಾತ್ರವೇ ಹೋಗಲಾಡಿಸುವಂತಹುದು. ಇದಕ್ಕೆ ನನ್ನ ಮನಸ್ಸು ಎಂತಹುದೆಂದು ಚೆನ್ನಾಗಿ ಗೊತ್ತಾಗಿದೆ." ಎಂದು ಸುದರ್ಶನನು ಉತ್ತರ ಕೊಡುತ್ತಿದ್ದನು.

ಆ ಮಾತಿಗೆ ಸುದರ್ಶನನ ಮಕ್ಕಳು, "ಹೌದು. ರೋಗವನ್ನು ಪೂರ್ತಿ ಗುಣಮಾಡಿದರೆ ತಾನೇ ಔಷಧದ ಪ್ರಯೋಜನ ? ಚಿಂತೆ ಹೋಗಲಾಡಿಸಿಬಿಟ್ಟರೆ ಗಿಳಿಯ ಅಗತ್ಯವೇನಿದೆ ? ಪೂರ್ತಿ ಹೋಗಲಾಡಿಸುವ ಶಕ್ತಿ ಅದಕ್ಕಿಲ್ಲವೆಂದೇ ಆಯಿತು. ಅಷ್ಟೆಲ್ಲ ಮಾತಾಡುವ ಗಿಳಿ ಚಿಂತೆ ಪೂರ್ತಿ ಹೋಗುವ ಉಪಾಯವಾದರೂ ಹೇಳಬೇಡವೆ ?" ಎಂದರು.

ಅದು ನಿಜವೇ ಎಂದುಕೊಂಡು ಸುದರ್ಶನನು ಗಿಳಿಯನ್ನು ನೋಡಿ, "ಚಿಂತೆ ಶಾಶ್ವತವಾಗಿ ಹೋಗಿಬಿಡುವಂತಹ ಉಪಾಯವೇನಾದರೂ ಉಂಟೇ ?" ಎಂದು ಕೇಳಿದನು.

"ಅಯ್ಯಾ, ಪಂಜರದೊಳಗಿರುವವರು, ಹೊರಗಿರುವವರ ಚಿಂತೆಯನ್ನೂ ದಿಗಿಲನ್ನೂ ಹೋಗಲಾಡಿಸಲು ಸಾಧ್ಯವಿರುವ ಹಾಗೆ ನಿಮಗೆ ಕಾಣುತ್ತದೆಯೆ ? ತಮ್ಮ ದಿಗಿಲನ್ನೂ, ಚಿಂತೆಯನ್ನೂ ಹೋಗಲಾಡಿಸಿಕೊಳ್ಳಲು ಉಪಾಯ ಮಾತ್ರ ಹೇಳಬಲ್ಲೆ. ನೀವು ನಿಮಗಾಗಿ ಮಾತ್ರವೇ ಜೀವಿಸದೆ, ಇತರರಿಗಾಗಿಯೂ ಜೀವಿಸುವ ಕ್ರಮವನ್ನು ಬಳಕೆಗೆ ತರಬೇಕು. ಆಗ ಮಾತ್ರ ನಿಮಗೆ ಸ್ವಾರ್ಥವೆಂಬ ಪಂಜರದೊಳಗಿನಿಂದ ಚಿಂತೆಯನ್ನು ಕಳೆದುಕೊಳ್ಳಲು ಸಾಧ್ಯವಾಗುತ್ತದೆ" ಎಂದು ಹೇಳಿತು ಗಿಳಿ. ಆ ದಿನದಿಂದ ಸುದರ್ಶನನು ತನಗಿರುವುದರಲ್ಲಿ ಇಲ್ಲದವರಿಗೆ ಅಷ್ಟೋ ಇಷ್ಟೋ ಸಹಾಯ ಮಾಡಲು ತೊಡಗಿದನು. ಆದರಿಂದ ಅವನಿಗೆ ಹತ್ತು ಮಂದಿಯಲ್ಲಿ ಒಳ್ಳೆಯ ಹೆಸರು ಬರತೊಡಗಿತು. ಮನಸ್ಸಿಗೂ ಉತ್ಸಾಹ ಕಾಣತೊಡಗಿತು.

ಈಗ ನಿಜಕ್ಕೂ ಸುದರ್ಶನನ ಮನಸ್ಸಿಗೆ ಒಳ್ಳೆಯ ಸಂತೋಷವಾಗಿತ್ತು. ಅವನು ಮೊದಲಿನಂತೆ ಯಾವಾಗಲೂ ಗಿಳಿಯೊಂದಿಗೆ ಕಾಲಕ್ಷೇಪ ಮಾಡುವುದನ್ನು ತಗ್ಗಿಸಿ, ವ್ಯಾಪಾರ ವ್ಯವಹಾರಗಳನ್ನು ಕೂಡಾ ನೋಡತೊಡಗಿದನು. ಆ ವಿಷಯದಲ್ಲಿ ಮನೆಯವರಿಗೆ ಸಂತೋಷ ಉಂಟಾಯಿತು.

ಆದರೆ ತಂದೆಯ ವಿಪರೀತವಾದ ದಾನಧರ್ಮಗಳು ಮಕ್ಕಳಿಗೆ ಹಿಡಿಸಲಿಲ್ಲ. ಅವರು ಒಂದು ದಿನ ಸುದರ್ಶನನೊಂದಿಗೆ "ಅಪ್ಪಾ, ಎಷ್ಟಾದರೂ ಗಿಳಿ ಮನುಷ್ಯರ ಹಾಗೆ ಮಾತಾಡುವುದೇ ಅಸಹಜ. ನಾವು ಕಲಿಸಿದ ಪದಗಳನ್ನು ತಿರುಗಿ ಹೇಳುವುದಷ್ಟೇ ಅವುಗಳಿಂದಾಗುತ್ತದೆಯೇ ಹೊರತು, ಪೂರ್ತಿ ಮನುಷ್ಯನಂತೆ ಆಲೋಚಿಸುವ ಶಕ್ತಿ ಅವುಗಳಿಗಿಲ್ಲ, ಆದ್ದರಿಂದ ಇದು ಯಾವುದೋ ಮಂತ್ರದ ಗಿಳಿಯೋ ಎಂದು ನಮಗೆ ಅನುಮಾನವಾಗಿದೆ. ನಿಮ್ಮ ಪ್ರವರ್ತನೆ ನೋಡುವಾಗ ಅದು ನಿಮ್ಮ ಬುದ್ಧಿಯನ್ನೇ ಬದಲಾಯಿಸಿದ ಹಾಗೆ ಕಾಣಿಸುತ್ತದೆ. ನಿಮ್ಮ ಹತ್ತಿರ ವಿರುವ ಧನವನ್ನೆಲ್ಲಾ ದಾನವಾಗಿ ಹಂಚಿಸಬೇಕೆಂದು



ಯಾವನೋ ಶತ್ರು ಈ ಗಿಳಿಯನ್ನು ನಿಮ್ಮ ಬಳಿಗೆ ಕಳುಹಿಸಿರ ಬೇಕು. ಇದನ್ನು ದೂರ ತೊಲಗಿಸುವುದೇ ಕ್ಷೇಮ " ಎಂದರು.

ಇದನ್ನು ಕೇಳಿದ ಮೇಲೆ ಸುದರ್ಶನನು ಗಿಳಿಯೊಂದಿಗೆ, " ಗಿಳಿಯೇ, ಒಂದು ಸಂದೇಹ: ಸಾಧಾರಣವಾಗಿ ಪಕ್ಷಿಗಳಾವುದೂ ಆಲೋಚನೆ ಮಾಡಲಾರವು. ನಿನಗೆ ಮಾತ್ರ ಇಷ್ಟು ಆಲೋಚನೆಯ ಶಕ್ತಿ ಹೇಗೆ ಬಂತು ? ನಿನ್ನಂತಹ ಪಕ್ಷಿ ಬೇರೆಲ್ಲಿಯಾದರೂ ಇದೆಯೇ ?" ಎಂದು ಕೇಳಿದನು.

" ಒಂದು ಸಾರಿ ವಿಕ್ರಮಾರ್ಕನೆಂಬ ರಾಜನು ಗಿಳಿಯ ರೂಪವನ್ನು ತಾಳಿ ಜೀವಿಸಿದನು. ಆಗ ಅವನು ಒಂದು ಗಿಳಿಯನ್ನು ಮದುವೆಯಾದನು. ಆ ಗಿಳಿ ದಂಪತಿಗಳಿಗೆ ಹುಟ್ಟಿದವರು ನನ್ನ ಪೂರ್ವಿಕರು. ನನ್ನ ಕುಟುಂಬದವರು ಹಿಮಾಲಯದ ಆಚೆಗೇ ಇರುತ್ತಾರೆ. ನಾನು ಚಪಲತೆಯಿಂದ ಈಚೆಗೆ ಬಂದೆ " ಎಂದು ಹೇಳಿತು ಗಿಳಿ.

ಈ ಉತ್ತರವನ್ನು ಕೇಳಿ ಸುದರ್ಶನನು ತೃಪ್ತನಾದನು. ಆದರೆ ಅವನ ಮಕ್ಕಳಿಗೆ ಇದರಿಂದ ತೃಪ್ತಿಯಾಗಲಿಲ್ಲ. ತಂದೆಗೆ ಹೇಗೆ ತಿಳಿ ಹೇಳುವುದೆಂದೂ ಅವರಿಗೆ ಗೊತ್ತಾಗಲಿಲ್ಲ. ಸುದರ್ಶನನು ಮಾತ್ರ ಆ ಗಿಳಿ ಏನು ಕೇಳಿದರೂ ಕೊಡುತ್ತಿದ್ದನು.

" ಅಯ್ಯಾ, ನೀವು ಇಷ್ಟೆಲ್ಲಾ ಕೊಡುವಿರೇನೋ ನಿಜ, ನನಗೆ ಬೇಕಾದುದೊಂದನ್ನು ಕೇಳುತ್ತೇನೆ. ನೀವು ನನಗೆ ಸ್ವೇಚ್ಛೆಯನ್ನು ಕೊಡುವಿರಾ ಹೇಳಿರಿ ? ಅದನ್ನು ಕೊಟ್ಟರೆ ನಾನು ಬಹಳ ಸಂತೋಷ ಪಡುತ್ತಿದ್ದೆ " ಎಂದಿತು ಗಿಳಿ.

ಗಿಳಿಯ ಪ್ರಶ್ನೆಯನ್ನು ಕೇಳಿ, ಸುದರ್ಶನನು ಮೆಟ್ಟಿಬಿದ್ದಂತಾದನು. ಸ್ವಲ್ಪ ಹೊತ್ತು ಸುಮ್ಮನಿದ್ದು, " ಗಿಳಿಯೇ, ನಿನಗೆ ಏನು ಬೇಕಾದರೂ ಕೊಡವೆನಾದರೂ ಸ್ವೇಚ್ಛೆಯನ್ನು ಕೊಟ್ಟು ನಿನ್ನನ್ನು ಅಗಲಿರಲಾರೆ " ಎಂದು ಸುದರ್ಶನನು ಖಂಡಿತವಾಗಿ ಹೇಳಿಬಿಟ್ಟನು. ಆಮೇಲೆ ಗಿಳಿ ಅನೇಕ ಸಾರಿ ಸುದರ್ಶನನೊಂದಿಗೆ ತನಗೆ ಸ್ವೇಚ್ಛೆ ಕೊಡುವಂತೆ ಕೇಳಿತು. ಅವನು ಕೊಡಲೊಪ್ಪಲಿಲ್ಲ.

ಒಂದುದಿನ ಏನೋ ಕೆಲಸದ ಅವಾಂತರದಲ್ಲಿ ಪಂಜರದ ಬಾಗಿಲು ಮುಚ್ಚಲು ಮರೆತನು. ಆದರೆ ಗಿಳಿ ಹಾರಿ ಹೋಗಲಿಲ್ಲ.

ಇದನ್ನು ನೋಡಿ ಸುದರ್ಶನನು ಆಶ್ಚರ್ಯಪಟ್ಟು " ನಿನಗೆ ಸ್ವೇಚ್ಛೆ ಬೇಕೆಂದಿದೆ ಅನ್ನುತ್ತೀ. ಗೂಡಿನ ಬಾಗಿಲು ತೆರೆದೇ ಇತ್ತಲ್ಲ ? ಬಂದ ಅವಕಾಶವನ್ನು ಏಕೆ ಉಪಯೋಗಿಸಿಕೊಳ್ಳಲಿಲ್ಲ ?" ಎಂದು ಗಿಳಿಯನ್ನು ಕೇಳಿದನು.

" ನನ್ನದು ಯಾವ ವಂಶವೆಂದು ಈ ಮೊದಲೇ ಹೇಳಿದ್ದೇನೆ. ನಾನು ತಪ್ಪು ಕೆಲಸ ಮಾಡಲಾರೆನು. ನೀವು ಸಾವಿರ ವರಹಕೊಟ್ಟು ನನ್ನನ್ನು ಕೊಂಡುಕೊಂಡವರು. ನಿಮಗೆ ನನ್ನ ಮೇಲೆ ಎಲ್ಲಾ ಹಕ್ಕುಗಳೂ ಇವೆ. ನೀವು ಮನಃ ಪೂರ್ವಕವಾಗಿ

ಅನುಮತಿಕೊಟ್ಟ ಹೊರತು ನಾನು ಇಲ್ಲಿಂದ ಹೊರಟು ಹೋಗಲಾರೆ. ನ್ಯಾಯ ತಪ್ಪಿ ನಡೆಯಲು ನನ್ನ ಮನಸ್ಸೊಪ್ಪದು." ಎಂದಿತು ಗಿಳಿ.

ಆನಂತರ ಸುದರ್ಶನನು ಗಿಳಿಯ ಪಂಜರವನ್ನು ಮುಚ್ಚುವುದರಲ್ಲಿ ಅಷ್ಟೊಂದು ಶ್ರದ್ಧೆ ವಹಿಸಿಕೊಳ್ಳುವುದನ್ನು ಬಿಟ್ಟನು. ಒಂದು ದಿನ ಗಿಳಿ ಆತನೊಂದಿಗೆ, "ಅಯ್ಯಾ, ನೀವು ಬಾಗಿಲು ಮುಚ್ಚುವುದರಲ್ಲಿ ಅಶ್ರದ್ಧೆ ತೋರಿಸಬಾರದು. ಅವಕಾಶ ಮೇಲಿಂದ ಮೇಲೆ ಬರುತ್ತಾ ಇದ್ದರೆ ನನ್ನ ಮನಸ್ಸು ದುರ್ಬಲವಾಗುತ್ತದೆ. ಒಳ್ಳೆಯವರೂ ಕೆಟ್ಟವರಾಗುವುದು ಕೂಡ ಈ ಬಗೆಯ ತಪ್ಪುಗಳಿಂದಲೇ. ನಾನು ಎಂದೋ ಒಂದು ದಿನ ಓಡಿ ಹೋಗಿ ಬಿಡಲೂ ಸಾಕು" ಎಂದಿತು ಗಿಳಿ.

ಸುದರ್ಶನನು ಅನುಮಾನದಿಂದ ಗಿಳಿಯನ್ನು ನೋಡಿ, "ಓಡಿ ಹೋಗಬೇಕೆಂಬ ಬುದ್ಧಿ ನಿನಗಿದೆ. ಅದನ್ನು ನನ್ನ ಹತ್ತಿರ ಹೇಳಿ ಎಚ್ಚರಿಕೆ ಕೊಡುವುದೇಕೆ? ನೀನು ದೊಡ್ಡ ವಂಶದಲ್ಲಿ ಹುಟ್ಟಿರುವೆಯೆಂದ ಮೇಲೆ ತಪ್ಪು ಮಾಡುವ ಬುದ್ಧಿ ಹೇಗೆ ಬಂದೀತು?" ಎಂದು ಕೇಳಿದನು.

ಅದಕ್ಕೆ ಗಿಳಿ, "ಅಯ್ಯಾ, ಅನೇಕರಿಗೆ ತಪ್ಪು ಮಾಡಬಾರದೆಂತಲೇ ಇರುತ್ತದೆ. ಅವಕಾಶ ಸಿಕ್ಕಿದಾಗ ಮಾತ್ರ ಕೆಲವರಿಗೆ ತಪ್ಪು ಮಾಡದಿರಲಾಗುವುದಿಲ್ಲ. ನನ್ನದು ವಿಕ್ರಮಾರ್ಕ ವಂಶವಾದರೂ ವಿಕ್ರಮಾರ್ಕನಷ್ಟು ದೊಡ್ಡತನ ನನಗಿಲ್ಲ. ದಯಮಾಡಿ ನನ್ನನ್ನು ಲೋಭಕ್ಕೆ ಒಳಗಾಗುವಂತೆ ವರ್ತಿಸಬೇಡಿರಿ. ಪಂಜರದ ಬಾಗಿಲನ್ನು ಜಾಗರೂಕತೆಯಿಂದ ಮುಚ್ಚಿಬಿಡಿರಿ" ಎಂದಿತು.

ಈ ವಿಷಯವನ್ನೆಲ್ಲಾ ಸುದರ್ಶನನು ತನ್ನ ಹೆಂಡತಿ ಮಕ್ಕಳೊಂದಿಗೆ ಹೇಳಿದನು. ಆದರಿಂದ ಅವರಿಗೆ ಗಿಳಿಯ ಮೇಲೆ ಇನ್ನಷ್ಟು ಅನುಮಾನವಾಗಿ, "ಇದು ಬಹಳ ಅಪಾಯಕಾರಿಯಾದ ಗಿಳಿ. ಇದರಿಂದ



ನಿಮಗೂ ನಮ್ಮ ಕುಟುಂಬಕ್ಕೂ ಏನೋ ಕೇಡು ಬಾರದಿರದು" ಎಂದರು.

ಅದಕ್ಕೆ ತಕ್ಕ ಹಾಗೆ ಮುಂದೆ ಐದಾರು ದಿನಗಳಲ್ಲಿ ಸುದರ್ಶನನಿಗೆ ಯಾವುದೋ ಹೊಸ ಬಗೆಯ ರೋಗವೊಂದು ಬಂತು. ಯಾವ ಔಷಧಕ್ಕೂ ಆ ರೋಗ ಕಡಿಮೆಯಾಗಲಿಲ್ಲ. ವೈದ್ಯನು ಸುದರ್ಶನನೊಂದಿಗೆ, "ನಿಮ್ಮ ರೋಗ ಗುಣವಾಗಲು ರಾಜಗಂಧಿ ಎಂಬ ಮೂಲಿಕೆಯಿಂದಷ್ಟೇ ಸಾಧ್ಯ. ರಾಜಗಂಧಿಯ ಹೊರತು ಬೇರೆಯಾವುದರಿಂದಲೂ ಇದು ವಾಸಿಯಾಗುವುದಿಲ್ಲವೆಂದು ವೈದ್ಯ ಶಾಸ್ತ್ರ ಹೇಳುತ್ತದೆ. ಈ ಪ್ರಾಂತದಲ್ಲೆಲ್ಲಿಯೂ ಆ ಮೂಲಿಕೆ ಸಿಗುವಂತಹುದಲ್ಲ. ಅದು ಎಲ್ಲಿ ಸಿಗುವುದೆಂಬ ಸಂಗತಿಯೂ ನಮಗೆ ತಿಳಿಯದು" ಎಂದನು. ಆ ಮಾತು ಕೇಳಿ ಗಿಳಿ, "ನನಗೆ ಸ್ವೇಚ್ಛೆಯನ್ನು ಕೊಡುವುದಾಗಿ ಮಾತು ಕೊಟ್ಟರೆ, ಆ ರಾಜಗಂಧಿ ಮೂಲಿಕೆಯನ್ನು ನಾನು ತರುತ್ತೇನೆ" ಎಂದು ಹೇಳಿತು.



"ಅಯ್ಯಯ್ಯೋ! ರೋಗದಲ್ಲಿ ನರಳುವ ನನ್ನ ಹತ್ತಿರ ನೀನು ಇಲ್ಲದಿದ್ದರೆ ಹೇಗೆ?" ಎಂದು ಸುದರ್ಶನನು ದಿಗಿಲಿನಿಂದ ಹೇಳಿದನು.

ಈ ಪರಿಸ್ಥಿತಿ ಸುದರ್ಶನನ ಹೆಂಡತಿ ಮಕ್ಕಳಿಗೆ ಒಳ್ಳೆಯ ಅವಕಾಶವನ್ನುಂಟುಮಾಡಿತು. ಈ ಗಿಳಿಯ ಕಾರಣದಿಂದಲೇ ಯಜಮಾನನಿಗೆ ಈ ರೋಗ ಬಂದಿತೆಂದು ಹೇಳುತ್ತ, ಗಿಳಿಯನ್ನು ಪಂಜರದಿಂದ ಹೊರಗೆ ಬಿಟ್ಟು ಬಿಟ್ಟರು. ಆದರೆ ಗಿಳಿ ಸುದರ್ಶನನಿಗೆ ಮೋಸ ಮಾಡಲಿಲ್ಲ. ಮರುದಿನವೇ ಅದು ರಾಜಗಂಧಿ ಮೂಲಿಕೆಯನ್ನು ಕೊಕ್ಕಿನಲ್ಲಿ ಹಿಡಿದುಕೊಂಡು ಬಂದೇ ಬಂದಿತು.

ವೈದ್ಯನು ಆ ಮೂಲಿಕೆಯಿಂದ ಔಷಧಿ ತಯಾರಿಸಿ ಚಿಕಿತ್ಸೆ ನಡೆಸಲು, ಸುದರ್ಶನನ ರೋಗ ಪೂರ್ತಿ ವಾಸಿಯಾಯಿತು. ಅವನು ಗಿಳಿಯನ್ನು ನೋಡಿ, "ನಿನ್ನ ಮೂಲಕವಾಗಿ ನಾನು ಬದುಕಿ ಉಳಿದೆನು. ನೀನು ಹೊರಟು ಹೋಗುವುದಾದರೆ ನಾನು ತಡೆ ಹೇಳಲಾರೆ. ಆದರೆ ಇಲ್ಲೇ ಇದ್ದರೆ ಹೆಚ್ಚಿನ ಸಂತೋಷ ನನಗಾಗುತ್ತದೆ" ಎಂದನು.

ಅದಕ್ಕೆ ಗಿಳಿ, "ಬಹಳ ಕಾಲದ ಮೇಲೆ ನನ್ನವರೆಲ್ಲರನ್ನೂ ನೋಡಿ ಬಂದಿದ್ದೇನೆ. ಹೊರಟು ಬರುವಾಗ ಬೇಗ ಬರುತ್ತೇನೆಂದೂ ಅವರಿಗೆ ಹೇಳಿದ್ದೇನೆ. ನೀವು ನನಗಾಗಿ ಸಾವಿರ ವರಹ ಖರ್ಚು ಮಾಡಿದವರು. ನಾನು ನಿಮ್ಮ ಪ್ರಾಣ ಉಳಿಯುವಂತೆ ಮಾಡಿದ್ದೇನೆ. ಆದ್ದರಿಂದ ಇನ್ನು ನೀವು ನನ್ನ ಸ್ವೇಚ್ಛೆಗೆ ಅಡ್ಡಬರಬಾರದು!" ಎಂದು ಹೇಳಿ ಪಂಜರದಿಂದ ಹಾರಿಹೋಯಿತು.

ಅದು ಹೊರಟು ಹೋದ ಕೂಡಲೇ ಸುದರ್ಶನನು ಚಿಂತೆಯಿಂದ ಬಾಡಿದನು. ಹೆಂಡತಿ ಮಕ್ಕಳು ಅವನೊಂದಿಗೆ, "ಅದು ಮಂತ್ರದ ಗಿಳಿ. ಅದನ್ನೇ ನೆನೆದು ದುಃಖಿಸಿ ಮನಸ್ಸು ಕೆಡಿಸಿಕೊಳ್ಳಬಾರದು" ಎಂದು ಮೇಲಿಂದ ಮೇಲೆ ಹೇಳಿದರು. ತಮ್ಮ ಮಾತಿನಲ್ಲಿ ಅವನಿಗೆ ನಂಬುಗೆ ಉಂಟಾಗಲು ಪಂಡಿತರನ್ನೂ ಕರೆಯಿಸಿದರು.

ಆ ಪಂಡಿತರು ಸುದರ್ಶನನೊಂದಿಗೆ, "ಮಾತಾಡುವ ಗಿಳಿಗಳು ಮಂತ್ರದ ಮಾಯಾವಿಗಳ ಒಂದು ಸಾಧನ. ಅವು ಮನೆಯೊಳಗಿನಿಂದ ಹೊರಟು ಹೋದರೆ ಒಳ್ಳೆಯ ಲಕ್ಷಣ. ಶುಭಸೂಚನೆ" ಎಂದರು.

ಕಾಲಕ್ರಮದಲ್ಲಿ ಸುದರ್ಶನನು ಆ ಮಾತನ್ನು ನಂಬಿ ನೆಮ್ಮದಿಯಾಗಿದ್ದನು. ಹಾಗಿರುವಾಗ ಕೆಲವೇ ದಿನಗಳಲ್ಲಿ ಆ ಗಿಳಿ ಮತ್ತೆ ಸುದರ್ಶನನ ಬಳಿಗೆ ಬಂದು, "ನನಗೆ ಇಲ್ಲಿಯ ಜೀವಿತವೇ ಅಭ್ಯಾಸವಾಗಿ ಹೋಯಿತು. ಎಷ್ಟು ಪ್ರಯತ್ನಿಸಿದರೂ ನನ್ನವರ ಜತೆಯಲ್ಲಿ ಇರಲು ಬೇಸರವಾಯಿತು. ನಾನು ನಿಮ್ಮೊಂದಿಗೇ ಇಲ್ಲಿಯೇ ಇರುತ್ತೇನೆ. ನಿಮ್ಮನ್ನು ಬಿಟ್ಟು ಹೋಗುತ್ತೇನೆಂದುದನ್ನು ಕ್ಷಮಿಸಿರಿ" ಎಂದಿತು.

ಆದರೆ ಸುದರ್ಶನನು ಅದಕ್ಕೆ ಒಪ್ಪಿಕೊಳ್ಳದೆ ಗಿಳಿಯ ಪಂಜರವನ್ನು ಹಳೆಯ ಸಾಮಾನುಗಳ

ಕೊಟಡಿಗೆ ಬಿಸಾಡಿಸಿ, ಗಿಳಿಯನ್ನು ಎಲ್ಲಿಗಾದರೂ ಹೋಗಲು ಹೇಳಿ ಕಳುಹಿಸಿ ಬಿಟ್ಟನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಸುದರ್ಶನನು ತನ್ನ ಪ್ರಾಣ ಕಾಪಾಡಿದ ಆ ಗಿಳಿ, ತನ್ನ ಆಶ್ರಯ ಕೇಳಿ ಬಂದಾಗ ನಿರಾಕರಿಸಿದ ನೇಕೆ? ಹೆಂಡತಿ ಮಕ್ಕಳ ಹಾಗೆ ಅವನೂ ಸಹಾ ಅದು ಮಂತ್ರದ ಗಿಳಿ ಎಂಬುದನ್ನು ನಂಬಿದನೆ? ಈ ಸಂಶಯಕ್ಕೆ ತಕ್ಕ ಉತ್ತರ ಗೊತ್ತಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆದು ಚೂರಾಗುತ್ತದೆ!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಪಂಡಿತರು ಬಂದು ಅದು ಮಂತ್ರದ ಗಿಳಿಯೆಂದು ಹೇಳಿದಾಗ ಸುದರ್ಶನನು ಆ ಮಾತು ನಂಬಿದುದೇನೋ ನಿಜವೇ. ತನಗೆ ಸಾಕಷ್ಟು ಧನವೂ, ಪ್ರೇಮಾದರದಿಂದ ನೋಡುವ ಹೆಂಡತಿ ಮಕ್ಕಳೂ ಇರುವಾಗ ಅನಿರ್ವಚನೀಯವಾದ ಏನೋ ಚಿಂತೆಯಿಂದ ಇರುತ್ತಿದ್ದುದೂ ನಿಜವೇ. ಆದರೆ ಗಿಳಿಯನ್ನು ಕೊಂಡುಕೊಂಡ ಮೇಲೆ, ಅದು ತನ್ನ ಮಾತುಗಳಿಂದ, ಒಳ್ಳೊಳ್ಳೆಯ ಸಲಹೆಗಳಿಂದ ಅವನ ಚಿಂತೆಯನ್ನು ಹೋಗಲಾಡಿಸಿತು. ಆ ಕಾರಣದಿಂದಲೇ ಸುದರ್ಶನನು ಅದು ಸ್ವೇಚ್ಛೆಯನ್ನು ಕೇಳಿದಾಗ, ಅದನ್ನು ಕೊಡಲು ಒಪ್ಪಲಿಲ್ಲ. ಅವನನ್ನು ರೋಗದಿಂದ ಗುಣಪಡಿಸಲು ಗಿಳಿ ರಾಜಗಂಧಿ ಮೂಲಿಕೆಯನ್ನು ತಂದು, ಮತ್ತೆ ತನ್ನವರ ಕಡೆಗೆ ಹೋಗುವೆನೆಂದು ಹೇಳಿ, ಇನ್ನು ಮೇಲೆ ತನ್ನ ಸ್ವೇಚ್ಛೆಗೆ ಅಡ್ಡ ಬರಬಾರದೆಂದೂ ಹೇಳಿತ್ತು. ಆದರಿಂದ ಅವನಿಗೆ ಆತ್ಮ ಬಂಧುಗಳಿಂದ ಮನುಷ್ಯನಿಗೆ ಇರಬೇಕಾದ ಆಪ್ಯಾಯತೆಯೂ ಬಾಧ್ಯತೆಯೂ ಅರ್ಥವಾಯಿತು. ಅದು ಮಾನವನಂತಹ ಗಿಳಿ. ಅನೇಕ ಮಂದಿ ಮನುಷ್ಯರು ತಮ್ಮ ಶಕ್ತಿ ಸಾಮರ್ಥ್ಯಗಳಿಂದ ಸಾಧಿಸಲಾಗದುದನ್ನು, ದೊಡ್ಡವರ ಮೂಲಕ ಪಡೆಯುವ ಸಂದರ್ಭ ಉಂಟಾದರೆ ತಮ್ಮವರನ್ನೆಲ್ಲಾ ಮರೆತು ಅವರ ಆಶ್ರಯದಲ್ಲೇ ಸೇರಿಕೊಳ್ಳುತ್ತಾರೆ. ಹಾಗೆಯೇ ಈ ಗಿಳಿ ಕೂಡಾ ತನ್ನ ಬುದ್ಧಿವಂತಿಕೆಗಳನ್ನು ತನ್ನವರಿಗಾಗಿ ಉಪಯೋಗಿಸಬೇಕೆಂಬ ಬಾಧ್ಯತೆಯನ್ನು ಮರೆತು, ಸುದರ್ಶನನು ಕಲ್ಪಿಸುವ ಸೌಖ್ಯಗಳಿಗಾಗಿ ಆಶೆಪಟ್ಟಿತು. ಆಹಾರಸಂಪಾದನೆಗಾಗಿ ಕಷ್ಟಪಡಬೇಕಾದ ಅಗತ್ಯವೂ, ಶತ್ರುಭಯವೂ ಸುದರ್ಶನನ ಮನೆಯಲ್ಲಿ ಅದಕ್ಕಿಲ್ಲ. ಗಿಳಿಯಲ್ಲಿರುವ ಆ ದೌರ್ಬಲ್ಯವನ್ನು ಹೋಗಲಾಡಿಸಲಿಕ್ಕೇ ಅವನು ಅದಕ್ಕೆ ತನ್ನ ಮನೆಯಲ್ಲಿ ಆಶ್ರಯ ಕೊಡಲಾರೆನೆಂದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ, ಮರದಕೊಂಬೆಯಲ್ಲಿ ನೇತಾಡಿತು.



# ಲಂಚಕೋರ

ಶೃಂಗೇರಿ ರಾಜನ ಆಸ್ಥಾನದಲ್ಲಿ ಕರ್ಕಟಶಾಸ್ತ್ರಿ ಎಂಬೊಬ್ಬ ಜೋಯಿಸನಿದ್ದನು. ತಾನು ದೇವಿಯ ಉಪಾಸಕನೆಂದೂ ದೇವಿಯ ಅನುಗ್ರಹದಿಂದ ಯಾವ ವಿಷಯದಲ್ಲಾದರೂ ಅಡಗಿದ್ದ ಸತ್ಯವನ್ನು ಹೊರ ಗೆಳೆಯಲು ಸಾಧ್ಯವಾಗುವುದೆಂದೂ ರಾಜನೊಂದಿಗೆ ಹೇಳುತ್ತಿದ್ದನು.

ಆದರಿಂದ ರಾಜನು ತನ್ನ ಬಳಿಗೆ ಬರುವ ಫಿರ್ಯಾದಿಗಳಿಗೆ ಕರ್ಕಟ ಶಾಸ್ತ್ರಿಯಿಂದಲೇ ತೀರ್ಪು ಹೇಳಿಸುವನು. ಮಾನವರ ತೀರ್ಪಿಗಿಂತ ದೇವಿಯ ತೀರ್ಪೆ ಸರಿಯಾದುದೆಂದು ರಾಜನೂ ಇತರರೂ ನಂಬುವಂತಾಗಿತ್ತು. ಆದರೆ ಕರ್ಕಟಶಾಸ್ತ್ರಿ ದೇವಿಯ ಹೆಸರಿನಲ್ಲಿ ಹೆಚ್ಚಿಗೆ ಲಂಚ ಕೊಟ್ಟವರಿಗೆ ಅನುಕೂಲವಾಗಿ ತೀರ್ಪು ಹೇಳುತ್ತಿದ್ದನು.

ಶಾಸ್ತ್ರಿ ಲಂಚಕೋರನೆಂದು, ದೇವಿಯ ಅನುಗ್ರಹವೆಂಬುದೆಲ್ಲಾ ಸುಳ್ಳೆಂದು ಆಸ್ಥಾನದಲ್ಲಿ ಪುಕಾರು ಹುಟ್ಟಿಕೊಂಡಿತು.

ಇದನ್ನು ತಿಳಿದ ರಾಜನು ಮಂತ್ರಿಯನ್ನು ಕರೆದು, ಈ ಪುಕಾರಿನಲ್ಲಿರುವ ನಿಜವನ್ನು ತಿಳಿದುಕೊಳ್ಳುವುದು ಹೇಗೆಂದು ಕೇಳಿದನು. ಒಂದು ಉಪಾಯ ಹೇಳಿದನು ಮಂತ್ರಿ.

ರಾಜನು ಕರ್ಕಟಶಾಸ್ತ್ರಿಯನ್ನು ಕರೆದು, "ನಮ್ಮ ಆಸ್ಥಾನ ಉದ್ಯೋಗಸ್ಥರಾದ ಶ್ರೀಪತಿ, ಮತ್ತೊಬ್ಬನ ಮೇಲೆ ಲಂಚದ ಆರೋಪ ಹಾಕಿ ನನ್ನ ಹತ್ತಿರ ಫಿರ್ಯಾದಿ ಮಾಡಿದ್ದಾನೆ. ಕೆಲವು ಮುಖ್ಯ ಕಾರಣಗಳಿಂದ ಅವನ ಹೆಸರು ಈಗ ಬಹಿರಂಗ ಪಡಿಸಲಾರೆ. ಶ್ರೀಪತಿಯ ಆರೋಪಣೆ ಎಷ್ಟು ನಿಜವೆಂಬುದನ್ನು ನಾಳೆ ಸಭೆಯಲ್ಲಿ ನೀವು ಬಹಿರಂಗಪಡಿಸಬೇಕು. ಆಮೇಲೆ ಅವನನ್ನು ಹಿಡಿದು ಶಿಕ್ಷೆಗೆ ಗುರಿಪಡಿಸುವಾಗ ಅವನು ಯಾರೆಂದು ಗೊತ್ತಾದರೆ ಸಾಕು" ಎಂದನು.

ಆ ದಿನ ರಾತ್ರಿ ಶ್ರೀಪತಿ ಕರ್ಕಟಶಾಸ್ತ್ರಿಯನ್ನು ಕಲೆತುಕೊಂಡು, "ಅಯ್ಯಾ, ನಾನು ಒಬ್ಬರ ಮೇಲೆ ಲಂಚಕೋರನೆಂದು ಪುಕಾರು ಮಾಡಿದ್ದೇನೆ. ಅದು ನಿಜವೆಂದು ನಿರೂಪಣವಾಗದಿದ್ದರೆ ನನ್ನನ್ನು ರಾಜರು ಶಿಕ್ಷಿಸುತ್ತಾರೆ. ಆದ್ದರಿಂದ ನೀವು ನನಗೆ ಸಹಾಯ ಮಾಡಬೇಕು" ಎಂದು ಶಾಸ್ತ್ರಿಯ ಕೈಗೆ ಸಾವಿರ ವರಹ ಕೊಟ್ಟನು.

ಮರುದಿನ ಕರ್ಕಟಶಾಸ್ತ್ರಿ ಸಭೆಯಲ್ಲಿ "ದೇವೀ ದಯಮಾಡು" ಎಂದು ಕಣ್ಣು ಮುಚ್ಚಿ ತೆರೆದು. "ಮಹಾರಾಜಾ ! ಶ್ರೀಪತಿ ಮಾಡಿದ ಪುಕಾರು ನಿಜವೇ !" ಎಂದನು.

ರಾಜನು ಕೂಡಲೇ ಭಟರನ್ನು ಕರೆದು, ಕರ್ಕಟಶಾಸ್ತ್ರಿಯನ್ನು ಬಂಧಿಸಲು ಆಜ್ಞೆಮಾಡಿದನು. ಶಾಸ್ತ್ರಿ ತಬ್ಬಿಬ್ಬಾಗಿ "ಮಹಾರಾಜಾ ! ನನ್ನನ್ನೇಕೆ ಬಂಧಿಸುವುದು ?" ಎಂದನು.

"ಶ್ರೀಪತಿ ಲಂಚಕೋರನೆಂದು ಫಿರ್ಯಾದಿ ಮಾಡಿದ್ದು ನಿಮ್ಮ ಮೇಲೆಯೇ !" ಎಂದನು ರಾಜ.





# ಹೆಡ್ಡ ವೈದ್ಯರು

**ಒಂದು** ಊರಿನಲ್ಲಿ ಕೋತಪ್ಪನೆಂಬವನಿಗೆ ಸೀತಾ ಫಲವೆಂದರೆ ಬಹಳ ಇಷ್ಟವಾಗಿತ್ತು. ಒಂದು ದಿನ ಅವನು ಬೀದಿಯಲ್ಲಿ ನಡೆಯುತ್ತಿದ್ದಾಗ, ಕಾಂತಪ್ಪನೆಂಬವನು ಅವನಿಗೆ ಇದಿರಾಗಿ ಬರುತ್ತಿದ್ದನು. ಕಾಂತಪ್ಪನು ಎಲ್ಲಿಂದಲೋ ಒಂದು ತಿಂಗಳ ಹಿಂದೆ ಆ ಊರಿಗೆ ಬಂದು ಒಂದು ಕಡೆಯಲ್ಲಿ ನೆಲೆಯೂರಿದ್ದನು. ಅವನ ಕೈಯಲ್ಲಿ ಒಳ್ಳೆಯದೊಂದು ಸೀತಾ ಫಲವಿದ್ದಿತು.

ಅದನ್ನು ನೋಡಿ ಕೋತಪ್ಪನು ಆಶ್ಚರ್ಯದಿಂದ, "ಅರೇ ! ಇದೇನಿದು ! ಈಗ ಸೀತಾಫಲದ ಕಾಲವೇ ಅಲ್ಲ. ಈ ಹಣ್ಣು ನಿನಗೆಲ್ಲಿ ಸಿಕ್ಕಿತು? ಹಣ್ಣು ನೋಡಿದರೆ ಈಗ ತಾನೇ ಮರದಿಂದ ಕೊಯ್ದುಕೊಂಡು ಬರುವ ಹಾಗಿದೆಯಲ್ಲಾ !" ಎಂದು ಕೇಳಿದನು.

"ಇದರಲ್ಲಿ ಆಶ್ಚರ್ಯಪಡುವಂಥಾದ್ದೇನಿದೆ ? ನನ್ನ ಮನೆಯ ಹಿಂದೆ ಇರುವ ಮಾವಿನ ಮರವು ವರ್ಷದುದ್ದಕ್ಕೂ ಎಲ್ಲಾ ಬಗೆಯ ಹಣ್ಣುಗಳನ್ನೂ ಕೊಡುತ್ತದೆ" ಎಂದನು ಕಾಂತಪ್ಪ.

"ಅದು ಹೇಗೆ ಸಾಧ್ಯ ?" ಎಂದು ಕೋತಪ್ಪನು ಇನ್ನಷ್ಟು ಆಶ್ಚರ್ಯದಿಂದ ಬಾಯಿ ತೆರೆದ.

"ಏಕೆ ಸಾಧ್ಯವಿಲ್ಲ ? ನಿತ್ಯಾನಂದಯೋಗಿಗಳು ನನ್ನ ಮನೆಗೆ ಬಂದು ಬಾವಿಯ ನೀರಿಗೆ ಮಂತ್ರ ಹಾಕಿ ಹೋಗಿದ್ದಾರೆ. ಆಗಿನಿಂದಲೂ ಹೀಗೆ ನಡೆಯುತ್ತಾ ಇದೆ. ಅನೇಕರು ಬಂದು ನನ್ನ ಬಾವಿಯ ನೀರು ಕೇಳುತ್ತಾರೆ. ನಾನು ಯಾರಿಗೂ ಕೊಡುವುದಿಲ್ಲವೆಂದು ಹೇಳುತ್ತೇನೆ. ಯಾಕೆಂದರೆ ಹಾಗೆ ಆ ನೀರಿನಿಂದ ಎಲ್ಲರ ಮರಗಳೂ ಎಲ್ಲಾ ಫಲಗಳನ್ನೂ ಕೊಟ್ಟುಬಿಟ್ಟರೆ ನನ್ನ ದೊಡ್ಡತನವೇನು ಉಳಿದೀತು? ಹಾಗೆ ಕೇಳುವುದೂ ತಪ್ಪು; ನಾನು ಕೊಡುವುದೂ ತಪ್ಪು" ಎಂದು ಹೇಳಿ ಕಾಂತಪ್ಪನು ತನ್ನ ದಾರಿ ಹಿಡಿದು ಹೋದನು.

ಕಾಂತಪ್ಪನ ಮನೆ ಅಲ್ಲಿಂದ ಬಹಳ ದೂರದಲ್ಲಿತ್ತು. ಆದರೂ ಅಲ್ಲಿಗೇ ಹೋಗಿ ಆ ವಿಚಿತ್ರಮರವನ್ನು ನೋಡಿ ಬರಬೇಕೆಂದು ಕೋತಪ್ಪನಿಗೆ ತೋರಿತು. ಅವನು ಸ್ವಲ್ಪ ನಡೆದು ಆ ಬೀದಿಯ ಕೊನೆಯನ್ನು ತಲಪುವಷ್ಟರಲ್ಲಿ, ಪಕ್ಕದ ಸಂದಿನಿಂದ ಬರುವ ತನ್ನ ಪರಿಚಿತನಾದ ಗೋವಿಂದನನ್ನು ನೋಡಿದನು. ಅವನೂ ಬಹಳ ತರಾತುರಿಯಲ್ಲಿರುವಂತೆ ಕಂಡಿತು. ಕೋತಪ್ಪನು ಏನೋ ಹೇಳಬೇಕೆಂಬುದರೊಳಗೆ

ಆರ್. ಲಕ್ಷ್ಮಿ

ಗೋವಿಂದನೇ ಮಾತಾಡಿಸಿ, "ಏನೋ ಕೋತಾ! ಕಾಂತಪ್ಪನ ಮನೆಗೆ ಹೋಗ ಬಾರದೇನೋ? ನಿನ ಗೊಂದು ಜನ್ಮದಲ್ಲಿ ನೋಡಸಿಗದ ವಿಚಿತ್ರ ನೋಡ ಬಹುದು." ಎಂದನು.

"ಅದು ಗೊತ್ತಿದೆ. ಅವನ ಮನೆಯ ಮಾವಿನ ಮರದಲ್ಲಿ ಸೀತಾಫಲ ಆಗುವುದು ತಾನೇ?" ಎಂದನು ಕೋತಪ್ಪ.

"ಅದು ಬೇರೆಯೇ? ಅದೇನಲ್ಲ, ಅವನ ಮನೇ ತೋಟದಲ್ಲಿ ಒಂದು ನಾಗರಹಾವು ಮನೆಗೆ ಬಂದವ ರೆಲ್ಲರನ್ನೂ ಹೆಡೆಯೆತ್ತಿ ಆಡಿಸಿ ಆಶೀರ್ವಾದ ಮಾಡುತ್ತದಂತೆ. ಅದು ನಿನಗೆ ಗೊತ್ತಿಲ್ಲವೆಂದು ಕಾಣುತ್ತದೆ" ಎಂದನು ಗೋವಿಂದ.

ಅದನ್ನು ಕೇಳಿ ಕೋತಪ್ಪ ಆಶ್ಚರ್ಯಪಟ್ಟರೆ, ಕೋತಪ್ಪ ಹೇಳಿದ್ದನ್ನು ಕೇಳಿ ಗೋವಿಂದ ಆಶ್ಚರ್ಯ ದಿಂದ ಬಾಯಿಬಿಟ್ಟ. "ಅಂದರೆ ಕಾಂತಪ್ಪನ ಮನೆ ಯಲ್ಲಿ ಅನೇಕ ವಿಚಿತ್ರಗಳೇ ಕಾಣುತ್ತವೆಂದಾಯಿತು!" ಎಂದುಕೊಂಡರು ಇಬ್ಬರೂ.

ಕೋತಪ್ಪನೂ ಗೋವಿಂದನೂ ಕೂಡಿ ಕಾಂತಪ್ಪನ ಮನೆಗೆ ಹೊರಟರು. ದಾರಿಯಲ್ಲಿ ಅವರಿಗೆ ನಾಗಪ್ಪ ನೆಂಬವನು ಕಾಣಿಸಿ, ಅವರನ್ನು ನೋಡಿ, "ಗೊತ್ತಾ ನಿಮಗೆ? ಕಾಂತಪ್ಪನ ಮನೆಯಲ್ಲಿ ಒಂದು ಪಾರಿಜಾತ ವೃಕ್ಷವಿದೆಯಂತೆ. ಅದು ಹಗಲಿನಲ್ಲಿ ನಿದ್ದೆ ಮಾಡಿ, ರಾತ್ರಿಯಲ್ಲಿ ಎಚ್ಚರವಿದ್ದು ಮನೆಗೆ ಕಾವಲುಕಾಯುತ್ತ ದಂತೆ, ಇನ್ನೂ ವಿಶೇಷವೇನೆಂದರೆ, ಅದರ ಎಲೆ ಮುರಿದರೆ ಅಳುತ್ತದಂತೆ, ಕಿಚಕಿಚ ಮಾಡಿದರೆ ನಗುತ್ತದಂತೆ!" ಎಂದನು.

"ಹೌದೇ! ಈ ಕಾಂತಪ್ಪ ಯಾವನೋ ಮಾಯಾ ಮಂತ್ರವಾದೀ ಹಾಗೆ ಇದ್ದಾನಲ್ಲ! ಇಷ್ಟೇನಾ ಬೇರೆ ನಾದರೂ ಅದ್ಭುತವಿದೆಯೇ?" ಎಂದು ಆಶ್ಚರ್ಯ ಪಟ್ಟನು ಕೋತಪ್ಪ.

ಮೂವರೂ ಸೇರಿ ನಡೆಯುವಾಗ ದಾರಿಯಲ್ಲಿ ಮತ್ತೆ ಕೆಲವರು ಜತೆಗೂಡಿದರು. ಅವರಲ್ಲಿ ಒಬ್ಬೊಬ್ಬನೂ ಕಾಂತಪ್ಪನ ಮನೆಯನ್ನು ಕುರಿತು ಒಂದೊಂದು ವಿಚಿತ್ರ ಹೇಳಿದನು. ಕಾಂತಪ್ಪನ



ಮನೆಯಲ್ಲಿ ಪೊರಕೆ ಅದೇ ಕಸ ಬಳಿಯುತ್ತದೆಂದು ಒಬ್ಬನೆಂದನು, ಅವನ ಮನೆಯಲ್ಲಿ ತೆಗೆದಷ್ಟು ಹಣವನ್ನು ಕೊಡುವ ಅಕ್ಷಯ ಪಾತ್ರೆಯೊಂದಿದೆ ಎಂದನು ಮತ್ತೊಬ್ಬ.

ಹೀಗೆ ಒಟ್ಟು ಹತ್ತು ಮಂದಿ ಕೂಡಿಕೊಂಡು ಕಾಂತಪ್ಪನ ಮನೆಗೆ ಹೋದರು. ಆ ಸಮಯದಲ್ಲಿ ಕಾಂತಪ್ಪನ ಮನೆಯ ಬಾಗಿಲು ಮುಚ್ಚಿಕೊಂಡಿದ್ದಿತು.

ಕೋತಪ್ಪನು ಮುಂದೆ ಹೋಗಿ ಮನೆಯ ಬಾಗಿಲನ್ನು ತಟ್ಟಿದನು. ಒಳಗಿನಿಂದ ಯಾರೋ ನಡೆದು ಬರುವ ಪಾದಧ್ವನಿ ಕೇಳಿಸಿತು. ಇಷ್ಟೊಂದು ಅದ್ಭುತಗಳೆಲ್ಲ ಇರುವ ಕಾಂತಪ್ಪನ ಮನೆಯೊಳಗಿರುವವರು ದೇವತೆಗಳೋ? ದೆವ್ವಗಳೋ? ಅವರು ಹೇಗಿರುತ್ತಾರೋ? ಎಂಬ ಕುತೂಹಲವು ಪ್ರತಿಯೊಬ್ಬರ ಕಣ್ಣೆದುರೊಳಗೆ ಕಾಣುತ್ತಿತ್ತು.

ಕಿರ್ರೆಂದು ಮೆಲ್ಲನೆ ಬಾಗಿಲು ತೆರೆದುಕೊಂಡಿತು. ಸುಮಾರು ಹದಿನೈದು ವಯಸ್ಸಿನ ಹುಡುಗನೊಬ್ಬನು ಬಂದವರನ್ನು ನೋಡಿ ಬೆರಗಾಗಿ, "ಯಾರು ನೀವೆಲ್ಲಾ? ಹೀಗೆ ಗುಂಪಾಗಿ ಏಕೆ ಬಂದಿರಿ?" ಎಂದು ಕೇಳಿದನು.

"ನಿಮ್ಮ ಮನೆಯಲ್ಲಿರುವ ಅದ್ಭುತ ವಿಚಿತ್ರಗಳನ್ನು ನೋಡಲು ಬಂದಿದ್ದೇವೆ" ಎಂದನು ಕೋತಪ್ಪ.

"ನಮ್ಮ ಮನೆಯಲ್ಲಿ ವಿಚಿತ್ರಗಳೇ? ಅದ್ಭುತಗಳೇ!" ಎಂದು ಹುಡಗನು ಕಣ್ಣು ಬಾಯಿಗಳನ್ನು ಅಗಲಿಸಿದನು.

ಕೋತಪ್ಪನು ಅವನಿಗೆ ತಾನು ಕೇಳಿದ ವಿಚಿತ್ರಗಳ ಪಟ್ಟಿಯನ್ನೇ ಒಪ್ಪಿಸಿದನು.

"ಹಾಗೇನು? ನೀವು ಯಾವ ಮನೆಯನ್ನು ಹುಡುಕಿಕೊಂಡು ಬಂದಿರೋ? ನಮ್ಮನೆಯಲ್ಲಂತೂ ಅಂತಹ ಯಾವ ವಿಚಿತ್ರಗಳೂ ಇಲ್ಲ" ಎಂದನು ಹುಡುಗ.

"ಇದು ಕಾಂತಪ್ಪನವರ ಮನೆ ತಾನೇ?" ಎಂದು ಕೋತಪ್ಪ ಕೇಳಲು, ಹುಡುಗನು ಹೌದೆಂದನು. "ಸ್ವತಃ ಕಾಂತಪ್ಪನವರೇ ಹಾಗೆಲ್ಲಾ ಇದೆಯೆಂದು





ನಮ್ಮೊಂದಿಗೆ ಹೇಳಿದರು. ಅದಕ್ಕೇ ಬಂದೆವು ನೋಡೋಣವೆಂದು " ಎಂದನು ಕೋತಪ್ಪ.

"ಅದೇನೋ ? ಅಪ್ಪ ಹಾಗೆಲ್ಲಾ ಏಕೆ ಹೇಳಿದರೋ ನನಗೊಂದೂ ಗೊತ್ತಿಲ್ಲ. ಅವುಗಳಲ್ಲಿ ಒಂದು ಕೂಡಾ ನಿಜವೂ ಅಲ್ಲ" ಎಂದು ಹೇಳಿ ಹುಡುಗನು ಮನೆಯೊಳಕ್ಕೆ ತಿರುಗಿದನು.

ತನ್ನ ಮನೆಯೊಳಗಿನ ವಿಚಿತ್ರಗಳನ್ನು ಬೇರೆಯವರಿಗೆ ತೋರಿಸಲು ಕೂಡದೆಂದೋ, ಇಷ್ಟವಿಲ್ಲದೆಯೋ ಹುಡುಗನು ಹೀಗೆ ಮಾತಾಡುತ್ತಾನೆಂದು, ಎಲ್ಲರೂ ಕೂಡಿ ಮನೆಯೊಳಗೇ ಹೊಕ್ಕರು. ಆ ಹುಡುಗ ಹೇಳಿದುದು ನಿಜವೇ ಆಗಿತ್ತು. ಒಳಗೆ ಎಲ್ಲಿಯೂ ಯಾವ ವಿಚಿತ್ರವೋ, ಅದ್ಭುತವೋ ಕಾಣಲಿಲ್ಲ. ಕಾಂತಪ್ಪನ ಮನೆಯ ಹಿಂಬದಿಯಲ್ಲಿ ಬಾವಿಯೂ ಇರಲಿಲ್ಲ. ಬೇರೆ ಬೇರೆ ಹಣ್ಣು ಕೊಡುವ ಮಾವಿನ ಮರವೂ ಇರಲಿಲ್ಲ. ಇದನ್ನು ನೋಡಿ ಬಂದ ಹತ್ತು ಮಂದಿಗೂ ಬಹಳ ಕೋಪ ಬಂದಿತು. ಅವರೆಲ್ಲ ಕೋಪದ ಬಿರುಸಿನಲ್ಲಿ ಕಾಂತಪ್ಪನನ್ನು ಹುಡುಕುತ್ತಾ ಅಲ್ಲಿಂದ ಹೊರಟರು. ಒಂದು ಕಡೆಯಲ್ಲಿ ಅವರು ಕಾಂತಪ್ಪನಿರುವುದನ್ನು ನೋಡಿದರು.

ಕೋತಪ್ಪ ಸಿಟ್ಟಿನಿಂದ ನಡುಗುವ ಧ್ವನಿಯಲ್ಲಿ "ಎಂಥಾ ಮನುಷ್ಯ ನೀನು ? ನಮಗೆಲ್ಲರಿಗೂ ಪೂರಾ ಸುಳ್ಳು ಸುಳ್ಳೇ ಹೇಳಿದಿ ! ಹೌದಾ ?" ಎಂದು ಕೇಳಿದನು.

"ಹೌದು !" ಎಂದನು ಕಾಂತಪ್ಪ ನಿರ್ದಾಕ್ಷಿಣ್ಯದಿಂದ ಯಾವ ವಿಶೇಷವೂ ಇಲ್ಲದವನಂತೆ.

"ಯಾಕೆ ಹಾಗೆ ಹೇಳಿದಿ ?" ಎಂದು ಕೋತಪ್ಪ ಗಿರಿಗಿರಿ ಕಣ್ಣು ತಿರುಗಿಸಿದನು ಅತ್ಯುಗ್ರನಾಗಿ.

"ಹೊಸತಾಗಿ ಒಂದು ಗ್ರಾಮಕ್ಕೆ ಹೋಗಿ ತಳ ಊರುವಾಗ, ಅಲ್ಲಿ ಎಷ್ಟು ಮಂದಿ ಹೆಡ್ಡದಡ್ಡರಿದ್ದಾರೆ ? ಎಂಬುದನ್ನು ಹೀಗೆ ಮಾಡಿದರೆ ತಾನೇ ಗೊತ್ತಾಗುತ್ತದೆ ?" ಎಂದನು ಕಾಂತಪ್ಪ.

"ಸುಳ್ಳು ಹೇಳಿಬಿಟ್ಟರೆ ಅದು ಗೊತ್ತಾಗುತ್ತದೇನು ?" ಎಂದು ಗೋವಿಂದನು ಮಹಾ ಕೋಪದಿಂದ ಕೇಳಿದ.

"ಯಾಕೆ ಗೊತ್ತಾಗುವುದಿಲ್ಲ ? ನನ್ನ ಸುಳ್ಳುಗಳನ್ನು ನಂಬಿದವರೆಲ್ಲರೂ ಹೆಡ್ಡದಡ್ಡರೇ ಅಲ್ಲವೇನು ?" ಎಂದನು ಕಾಂತಪ್ಪ.

ಕೋತಪ್ಪ ಗೋವಿಂದಾದಿಗಳು ಏನು ಹೇಳಲೂ ತೋರದೆ ಮುಖ ಮುಖ ನೋಡಿಕೊಂಡರು.

ಸ್ವಲ್ಪ ಹೊತ್ತು ಸುಮ್ಮನಿದ್ದು ಗೋವಿಂದನು ತಗ್ಗಿದ ದನಿಯಲ್ಲಿ, "ನಿನ್ನ ಸುಳ್ಳನ್ನು ಯಾರು ನಂಬಿದರೆಂದು ನಿನಗೆ ಹೇಗೆ ಗೊತ್ತಾಗುತ್ತದೆ ?" ಎಂದು ಕೇಳಿದನು.

"ನನ್ನ ಸುಳ್ಳನ್ನು ನಂಬಿದವರು ನನ್ನ ಮನೆಗೆ ಹೋಗುತ್ತಾರೆ. ನನ್ನ ಮಗ ಅವರನ್ನು ನೋಡುತ್ತಾನೆ. ಒಂದು ಸಾರಿ ನೋಡಿದ ಮುಖವನ್ನು ಅವನು ಮರೆಯುವುದಿಲ್ಲ. ಅವನನ್ನು ಕೇಳಿ ಅವನು

ಮಾಡುವ ವರ್ಣನೆಗಳಿಂದ ನಾನು ತಿಳಿದುಕೊಳ್ಳುತ್ತೇನೆ." ಎಂದನು ಕಾಂತಪ್ಪ.

"ಈಗ ನೀನು ಮನೆಗೆ ಹೋಗುವಿಯೇನು ?" ಎಂದು ಕೋತಪ್ಪನು ಕೇಳಿದ.

"ಇಲ್ಲ. ಊರೊಳಗೆ ಇನ್ನೂ ಸ್ವಲ್ಪ ಬೇರೆ ಕೆಲಸವಿದೆ." ಎಂದನು ಕಾಂತಪ್ಪ.

"ಸರಿ, ನಾವು ಹೋಗೋಣ. ಇಲ್ಲೇನು ಕೆಲಸ ?" ಎಂದು ಹೇಳಿ, ಅವರೆಲ್ಲರೂ ನೇರಾಗಿ ಕಾಂತಪ್ಪನ ಮನೆಗೇ ಹೋದರು.

ಅವರನ್ನು ನೋಡಿ ಕಾಂತಪ್ಪನ ಮಗ, "ಪುನಃ ಬಂದಿರಲ್ಲಾ ? ಏಕೇ ?" ಎಂದನು.

"ನೋಡಪ್ಪಾ, ನಾವೆಲ್ಲಾ ಒಬ್ಬೊಬ್ಬರು ನಿನಗೆ ಒಂದೊಂದು ವರಹ ಕೊಡುತ್ತೇವೆ. ನಾವು ನಿಮ್ಮ ಮನೆಗೆ ಬಂದು ವಿಚಿತ್ರ ವಿಷಯವನ್ನು ಕುರಿತು ಕೇಳಿದೆವೆಂಬ ಸಂಗತಿಯನ್ನು ನಿನ್ನ ಅಪ್ಪನೊಂದಿಗೆ ಹೇಳಬಾರದು. ಒಪ್ಪುವಿಯಾ ?" ಎಂದ ಕೋತಪ್ಪ.

"ಸರಿ, ಹೇಳುವುದಿಲ್ಲ" ಎಂದು ಕಾಂತಪ್ಪನ ಮಗ ಹೇಳಿದ ಕೂಡಲೇ ಕೋತಪ್ಪ ಎಲ್ಲರ ಕೈಯಿಂದ ಒಂದೊಂದು ವರಹಾ ತೆಗೆದುಕೊಂಡು ಒಟ್ಟು ಹತ್ತು ವರಹಾ ಕಾಂತಪ್ಪನ ಮಗನ ಕೈಗೆ ಗಿಜಗಿಜನೆ ಕೊಟ್ಟನು.

ಆಮೇಲೆ ಎಲ್ಲರೂ ನಿಶ್ಚಿಂತರಾಗಿ ಅಲ್ಲಿಂದ ತಮ್ಮ ದಾರಿ ಹಿಡಿದು ಹೊರಟು ಹೋದರು.

ಕಾಂತಪ್ಪ ಊರೆಲ್ಲಾ ತಿರುಗಿ ರಾತ್ರಿಯಾದ ಮೇಲೆ ಮನೆಗೆ ಹಿಂತಿರುಗಿದನು. ಕಾಂತಪ್ಪನ ಮಗ ತಂದೆಯೊಂದಿಗೆ, "ಬೆಳಗ್ಗಿನಿಂದ ಸಾಯಂಕಾಲದವರೆಗೆ ಅದ್ಭುತ ವಿಷಯ ವಿಚಾರಿಸಲು ಬಂದವರಿಂದ ಒಟ್ಟು ನೂರುವರಹಗಳು ದೊರಕಿವೆ. ನೀವು ಸಾಲಗೀಲ ಏನೂ ಮಾಡದೆ ವ್ಯಾಪಾರ ಮಾಡಲು ಈ ಕೆಲಸ ಸಹಾಯವಾಗಿದೆ." ಎಂದನು.

"ಹೌದು ಹೌದು, ವ್ಯಾಪಾರ ಕೂಡಾ ಇಂತಹ ಊರಿನಲ್ಲೇ ಒಳ್ಳೆಯ ಲಾಭದಾಯಕವಾಗಿ ಸಾಗುತ್ತದೆ. ಕೇವಲ ಹೆಡದಡ್ಡರಿಗಿಂತಲೂ, ತಮ್ಮನ್ನು ಹೆಡ್ಡದಡ್ಡರೆಂದು ಬೇರೆಯವರಾರೂ ಅಂದುಕೊಳ್ಳಬಾರದೆಂದುಕೊಳ್ಳುವವರಿಂದಲೇ ನಮಗೆ ಲಾಭ ಹೆಚ್ಚು. ಈ ಊರಿನಲ್ಲಿ ಅಂಥವರು ಬಹಳ ಮಂದಿ ಇರುವ ಹಾಗಿದೆ." ಎಂದು ಕಾಂತಪ್ಪ ಉತ್ಸಾಹದಿಂದ ಹೇಳಿದನು.

ಮರುದಿನ ಕಾಂತಪ್ಪ ಎಮ್ಮೆಗಳನ್ನು ಕೊಂಡುಕೊಂಡು, ಆ ಊರಿನಲ್ಲಿ ಹಾಲಿನ ವ್ಯಾಪಾರವನ್ನು ಪ್ರಾರಂಭಿಸಿದನು. ಅವನ ವ್ಯಾಪಾರವು ದಿನದಿನಕ್ಕೂ ವರ್ಧಿಸುತ್ತಾ ಹೋಯಿತು. ಒಳ್ಳೆಯ ಹಾಲು ಕೊಡುವವನೆಂಬ ಹೆಸರೂ ಅವನಿಗೆ ಬಂದಿತು.





# ಜ್ಞಾನೋದಯ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಕೋಸಲ ದೇಶದ ರಾಜನಾಗಿ ಜನ್ಮವೆತ್ತಿದನು. ಅವನಿಗೆ ಸತ್ಯಸೇನ ನೆಂಬೊಬ್ಬ ಕುಮಾರನಿದ್ದನು. ಸತ್ಯಸೇನನಿಗೆ ಯುಕ್ತ ವಯಸ್ಸಿನಲ್ಲಿ ಯುವರಾಜ ಪಟ್ಟಾಭಿಷೇಕವೂ ಮದುವೆಯೂ ಆಯಿತು. ಹೆಂಡತಿ ಶಂಬುಲಾದೇವಿ ಅಪೂರ್ವ ಸುಂದರಿಯಾಗಿದ್ದಳು.

ಮುಂದೆ ಕೆಲವೇ ವರ್ಷಗಳಲ್ಲಿ ಏನೋ ದುರದೃಷ್ಟ ವಶದಿಂದ ಯುವರಾಜನಾದ ಸತ್ಯಸೇನನಿಗೆ ಕುಷ್ಠ ರೋಗ ಬಂದಿತು. ಎಷ್ಟು ಮಂದಿ ವೈದ್ಯರು ಏನೇನು ಚಿಕಿತ್ಸೆ ಮಾಡಿದರೂ ಆ ವ್ಯಾಧಿ ಕಡಿಮೆ ಯಾಗುವುದನ್ನು ಬಿಟ್ಟು ಹೆಚ್ಚು ಹೆಚ್ಚೇ ಆಗ ತೊಡಗಿತು. ಅಂತಹ ಅಸಹ್ಯ ವ್ಯಾಧಿಯನ್ನಿಟ್ಟು ಕೊಂಡು ನಾಲ್ವರ ನಡುವೆ ಇರಲು ಮನಸ್ಸೊಪ್ಪದೆ ಯುವರಾಜನು ತಂದೆಯ ಅನುಮತಿಯನ್ನು ಕೇಳಿ, ನಿರ್ಜನವಾದ ಅರಣ್ಯದಲ್ಲಿ ವಾಸ ಮಾಡಲಿಕ್ಕೆ ಹೊರಟನು. ಆಗ ಶಂಬುಲಾದೇವಿ ಕೂಡಾ ಗಂಡ ನೊಂದಿಗೆ ತಾನೂ ಹೊರಡುವೆನೆಂದು ಹಟ ಹಿಡಿದಳು. ಯುವರಾಜನು ಬೇಡವೆಂದರೂ ಅವಳು ಕೇಳಲಿಲ್ಲ.

ಅರಣ್ಯದಲ್ಲಿ ಜಲಸಮೃದ್ಧಿಯೂ, ಫಲ ಸಮೃದ್ಧಿಯೂ ಇರುವ ಸ್ಥಳವನ್ನು ನೋಡಿ ಸತ್ಯ ಸೇನನು ಒಂದು ಪರ್ಣಶಾಲೆ ನಿರ್ಮಿಸಿಕೊಂಡು ಅದರಲ್ಲಿ ಇರತೊಡಗಿದನು. ಶಂಬುಲಾದೇವಿ ಉದಯಕಾಲದಲ್ಲೇ ಎದ್ದು, ಮನೆಗೆಲಸಗಳನ್ನು ಮಾಡಿ, ಗಂಡನಿಗೆ ಹಲ್ಲುಜ್ಜಲು ಅಣಿಗೊಳಿಸಿ, ಮುಖ ತೊಳೆದಾದ ಮೇಲೆ ತಿನ್ನಲು ಹಣ್ಣುಗಳನ್ನು ಕೊಡುವಳು. ಅನಂತರ ತಾನೂ ಒಂದಿಷ್ಟು ತಿಂದು ಬುಟ್ಟಿ ಗುದ್ದಲಿಗಳೊಂದಿಗೆ ಕಾಡಿನೊಳಗೆ ಹೋಗಿ ಕಂದ ಮೂಲಗಳನ್ನು ತರುವಳು. ಕೊಳದಿಂದ ನೀರು ಹೊತ್ತುಕೊಂಡು ಬರುವಳು. ಗಂಡನಿಗೆ ಸ್ನಾನ ಮಾಡಿಸುವಳು. ಅವನ ಭೋಜನವಾದಮೇಲೆ ತಾನು ಭೋಜನ ಮಾಡುವಳು. ಈ ವಿಧವಾಗಿ ಗಂಡನನ್ನು ಜಾಗರೂಕತೆಯಿಂದ ನೋಡಿಕೊಂಡಿದ್ದಳು.

ಒಂದು ದಿನ ಅವಳು ಹಣ್ಣು ಸಂಗ್ರಹಿಸಲಿಕ್ಕಾಗಿ ಒಂದು ಹೊಸ ದಿಕ್ಕಿಗೆ ಹೋದಳು. ಸ್ವಲ್ಪ ದೂರ ಹೋಗಲು ಅವಳಿಗೊಂದು ಗುಡ್ಡದ ಕೊನೆಭಾಗವು ಕಂಡಿತು. ಅದರ ಹತ್ತಿರ ಒಂದು ಸಣ್ಣ ಸರೋವರ ವಿರುವುದನ್ನು ನೋಡಿದಳು. ಅದನ್ನು ನೋಡಿದ

ಕೊಡಲೇ ಅವಳಿಗೆ ಅದರಲ್ಲಿಳಿದು ಸ್ನಾನಮಾಡ ಬೇಕೆಂದು ತೋರಿತು. ಅವಳು ಆ ಸರೋವರ ದಲ್ಲಿಳಿದು ಸ್ನಾನಮಾಡಿ ಮೇಲೆ ಬಂದಾಗ, ಅವಳ ಶರೀರವು ಅಪ್ಪಟ ಬಂಗಾರದ ವರ್ಣದಿಂದ ಹೊಳೆ ಯಲು ತೊಡಗಿತು.

ಆದರೆ ಈ ಸಂಗತಿ ಅವಳಿಗೆ ಗೊತ್ತಾಗಲಿಲ್ಲ. ಅವಳು ಅಲ್ಲಿಂದ ಹಿಂದಿರುಗುವಾಗ ಇದಿರಾಗಿ ಬರುತ್ತಿದ್ದ ಕಿರಾತನೊಬ್ಬನು ಅವಳನ್ನು ನೋಡಿ ಬೆರಗಾಗಿ ನಿಂತನು. ಅವನು ಅವಳನ್ನು ತನ್ನ ಕೇರಿಗೆ ಬರುವಂತೆ, ತನ್ನನ್ನು ಮದುವೆಯಾಗುವಂತೆ ಒತ್ತಾಯಿಸ ತೊಡಗಿದನು. ಅವಳನ್ನು ಮುಂದೆ ನಡೆಯಲು ಬಿಡದೆ ಅಡ್ಡವಾಗಿ ನಿಂತುಬಿಟ್ಟನು.



ಇದನ್ನು ನೋಡಿ ಶಂಬುಲಾದೇವಿ ಕೋಪದಿಂದ, "ಎಲೋ ಪಾಪಾತ್ಮನೇ ! ನಾಶವಾಗಿ ಹೋಗುವಿ !" ಎಂದು ಬಿಂದಿಗೆಯಲ್ಲಿದ್ದ ನೀರನ್ನು ಅವನ ಮೇಲೆ ಸ್ವಲ್ಪ ಚೆಲ್ಲಿದಳು. ಸಿಡಿಲು ಪೆಟ್ಟು ಬಿದ್ದವನ ಹಾಗೆ ಕೆಟ್ಟದನಿಯಿಂದ ಕೂಗಿ ಬಿದ್ದನು ಆ ಕಿರಾತ.

ಶಂಬುಲಾದೇವಿ ಕಿರಾತನ ಉಪದ್ರದಿಂದ ಪಾರಾಗಿ, ನೀರನ್ನೂ ತೆಗೆದುಕೊಂಡು ಪರ್ಣಶಾಲೆಗೆ ತಿರುಗಿ ಬರುವಾಗ ಬಹಳ ಹೊತ್ತಾಗಿ ಹೋಯಿತು. ಗಂಡನು "ಏಕೆ ಇಷ್ಟು ತಡವಾಯಿತು ?" ಎಂದು ಕೇಳಿದನು.

ಶಂಬುಲಾದೇವಿ ನಡೆದ ಸಮಾಚಾರವನ್ನೆಲ್ಲಾ ನಡೆದ ಹಾಗೆ ಹೇಳಿದಳು. ಆದರೆ ಸತ್ಯಸೇನನು ಅವಳ ಮಾತನ್ನು ನಂಬದೆ, "ಹೆಂಗುಸರು ಏನೇನೋ ಕಲ್ಪಿಸಿ ಹೇಳಬಲ್ಲರು. ಎಲ್ಲಿ ತಿರುಗಿದರೂ ನಿನ್ನನ್ನು ಕೇಳುವವರಿಲ್ಲ" ಎಂದನು.

"ಸ್ವಾಮಿ ! ನಾನು ಹೇಳುವುದು ಸತ್ಯವಾದರೆ ನಿಮ್ಮ ಈ ವ್ಯಾಧಿ ಈ ನೀರಿನಿಂದ ಗುಣವಾಗಿ ಹೋಗಬೇಕು !" ಎಂದು ಹೇಳುತ್ತ ಬಿಂದಿಗೆಯಲ್ಲಿ ತಂದ ನೀರನ್ನು ಗಂಡನಿಗೆ ಅಭಿಷೇಕ ಮಾಡಿದಳು ಶಂಬುಲಾದೇವಿ. ಕೂಡಲೇ ಇಂದ್ರಜಾಲದ ಹಾಗೆ ಅವನ ವ್ಯಾಧಿ ಪೊರೆಕಳಚಿ ಬಿದ್ದಂತೆ ಮಾಯವಾಗಿ ಹೋಯಿತು. ಅಲ್ಲದೆ ಅವನ ಶರೀರ ಕೂಡಾ ಬಂಗಾರದ ಹಾಗೆ ಹೊಳೆಯ ತೊಡಗಿತು. ತನ್ನ ಹೆಂಡತಿಯ ಪಾತಿವ್ರತ್ಯಕ್ಕಿಂತಲೂ ತನ್ನ ವ್ಯಾಧಿ ಗುಣವಾಯಿತೆಂಬ ವಿಷಯವೇ ಅವನಿಗೆ ಹೆಚ್ಚು ಆನಂದವನ್ನುಂಟು ಮಾಡಿತು.

ಅವನು ಕೂಡಲೇ ವನವಾಸವನ್ನು ಬಿಟ್ಟು, ಕೋಸಲ ರಾಜಧಾನಿಯ ಹತ್ತಿರವಿದ್ದ ಉದ್ಯಾನವನಕ್ಕೆ ಬಂದು ತಂಗಿ, ತನ್ನ ಬರುವಿಕೆಯನ್ನು ಕುರಿತು ತಂದೆಗೆ ಸುದ್ದಿ ಕಳುಹಿಸಿದನು.

ಮಹಾರಾಜನು ಬಹಳ ಸಂತೋಷದಿಂದ ಸ್ವತಃ ಛತ್ರ ಚಾಮರ ಮೊದಲಾದ ಲಾಂಛನಗಳೊಂದಿಗೆ ಹೊರಟು ಉದ್ಯಾನಕ್ಕೆ ಬಂದು, ತನ್ನ ಕುಮಾರನಿಗೆ ಸ್ವಾಗತ ಹೇಳಿದನು. ರಾಜನು ತನ್ನ ಮಗನ ವ್ಯಾಧಿ ಯನ್ನು ಗುಣಪಡಿಸಿದಳೆಂಬ ಕಾರಣದಿಂದ, ವ್ಯಾಧಿ

ಗುಣವಾಗುವವರೆಗೂ ಅವನಿಗೆ ಸಹಾಯಕಳಾಗಿದ್ದ ವಳಾದುದರಿಂದ ಶಂಬುಲಾದೇವಿಗೆ ಪಟ್ಟದ ರಾಣಿಯ ಅಂತಸ್ತನ್ನು ಕೊಟ್ಟು, ಯುವರಾಜನಿಗೆ ರಾಜ ಪಟ್ಟಾಭಿಷೇಕಮಾಡಿ, ತಾನು ವಾನಪ್ರಸ್ಥಾಶ್ರಮ ವನ್ನು ಸ್ವೀಕರಿಸಿದನು.

ಸತ್ಯಸೇನನು ತಂದೆಯ ಆಜ್ಞೆಯನ್ನು ಮೀರ ಲಾಗದೆ, ಶಂಬುಲಾದೇವಿಯನ್ನು ಪಟ್ಟದ ರಾಣಿ ಯಾಗಿ ಮಾಡಿಕೊಂಡನೇ ಹೊರತು, ಅವಳ ಮೇಲೆ ಪೂರ್ತಿ ಉದಾಸೀನತೆಯಲ್ಲಿ, ಬೇರೆ ಪತ್ನಿಯರ ಜತೆಯಲ್ಲೇ ಕಾಲಕಳೆಯುತ್ತಿದ್ದನು. ಗಂಡನ ಅನಾದರಣೆಯಿಂದಾಗಿಯೂ, ಸವತಿಯರ ಈರ್ಷ್ಯಾಸೂಯೆಗಳಿಂದಾಗಿಯೂ ಶಂಬುಲಾದೇವಿ ಚಿಂತೆಯಿಂದ ಸೊರಗಿ ಶಲ್ಯದಂತಾದಳು.

ಹೀಗಿರುವಾಗ ಒಂದು ದಿನ ಅವಳ ಮಾವಯ್ಯನು ಅರಣ್ಯದಿಂದ ಊರೊಳಗೆ ಬಂದವನು, ಶಂಬುಲಾ ದೇವಿಯ ಮನೆಗೆ ಊಟಕ್ಕೆ ಬಂದನು. ಅವಳ ಸ್ಥಿತಿಯನ್ನು ನೋಡಿ ಆಶ್ಚರ್ಯಪಟ್ಟು, "ಏಕೆ ಹೀಗಿರುವಿ? ಏನಾಯಿತು?" ಎಂದು ಕೇಳಿದನು.

"ಗಂಡನ ಆದರಣೆ ಇಲ್ಲದ ಮೇಲೆ ಮತ್ತೆ ಹೇಗಿದ್ದೇನು ಮಾವಯ್ಯಾ?" ಎಂದಳು ಶಂಬುಲಾ ದೇವಿ. ಮುದುಕರಾಜನು ನಡೆದ ಸಮಾಚಾರವನ್ನೆಲ್ಲಾ ಕೇಳಿ, ಕೂಡಲೇ ಸತ್ಯಸೇನನನ್ನು ತನ್ನ ಬಳಿಗೆ ಕರೆಯಿಸಿ, "ಅಪ್ಪಾ ಮಗನೇ, ಇದೇನು ಪಾಪದ ಕೆಲಸ ಮಾಡಿದಿ? ಕೃತಘ್ನತೆಗಿಂತ ಹೆಚ್ಚಿನ ಪಾಪವು ಬೇರೊಂದಿಲ್ಲ. ಭಯಂಕರವಾದ ವ್ಯಾಧಿಯಲ್ಲಿ ನೀನು ಮನುಷ್ಯರ ನಡುವೆ ಇರಲಾಗದೆ ಕಾಡಿಗೆ ಹೋದಾಗ ನಿನ್ನ ಹಿಂದೆಯೇ ಬಂದು ರಾತ್ರೀ ಹಗಲೂ ನಿನಗೆ ಸೇವೆ ಮಾಡಿ, ಕಡೆಗೆ ನಿನ್ನ ವ್ಯಾಧಿಯನ್ನು ಕೂಡಾ ಗುಣಮಾಡಿದವಳಾದ ಹೆಂಡತಿಯನ್ನು, ರಾಜ್ಯವು ಕೈಗೆ ಬಂದಕೂಡಲೇ ತೃಣೀಕರಿಸುವೆಯಾ? ಈ ರಾಜ್ಯಗಳೂ, ವೈಭವಗಳೂ ಯಾರಿಗಾದರೂ ಲಭಿ ಸುತ್ತವೆ. ಆದರೆ ಪತಿವ್ರತೆಯಾದ ಹೆಂಡತಿ ಯಾವನೋ ಅದೃಷ್ಟವಂತನಿಗೆ ಹೊರತು ಲಭಿಸ ಲಾರಳು. ಆದುದರಿಂದ ಶಂಬುಲಾದೇವಿಯನ್ನು ಅನಾದರದಿಂದ ನೋಡಬೇಡ. ಅದರಿಂದ ನಷ್ಟಕ್ಕೆ ಬೀಳುವವನು ನೀನೇ!" ಎಂದು ಬೋಧಿಸಿದನು.

ಇದರಿಂದ ಸತ್ಯಸೇನನಿಗೆ ಜ್ಞಾನೋದಯ ವಾಯಿತು. ಅವನು ಶಂಬುಲಾದೇವಿಯ ಬಳಿಗೆ ಹೋಗಿ ಕ್ಷಮಾಪಣೆ ಕೇಳಿಕೊಂಡು, ಅವಳಿಗೆ ತನ್ನ ಮೇಲೂ, ಇತರ ಪತ್ನಿಯರ ಮೇಲೂ ಎಲ್ಲಾ ಅಧಿ ಕಾರಗಳೂ ನಡೆಯುವ ಹಾಗೆ ಮಾಡಿದನು. ಆಮೇಲೆ ಗ್ರಹಣಬಿಟ್ಟು ಹೋದ ಹಾಗೆ ಶಂಬುಲಾದೇವಿಯ ಸ್ಥಿತಿ ಚೆನ್ನಾಯಿತು.





ದಕ್ಷಿಣಭಾರತ ದೇಶದಲ್ಲಿ ಪುದುಚ್ಚೇರಿಯ ಕೇಂದ್ರ ಸ್ಥಾನದಲ್ಲಿದ್ದ ಡೂಪ್ಲೇಯ ಮುಖಂಡತ್ವದಲ್ಲಿ ಫ್ರೆಂಚರು ಬಲಿಷ್ಠರಾಗ ತೊಡಗಿದರು. ೧೭೪೦ನೇ ವರ್ಷದಲ್ಲಿ ಐರೋಪಾದಲ್ಲಿ ಯುದ್ಧವು ಪ್ರಾರಂಭವಾಯಿತು. ಫ್ರಾನ್ಸ್, ಇಂಗ್ಲೆಂಡ್ ದೇಶಗಳು ಬದ್ಧ ಶತ್ರುಗಳಾದರು. ಅದಕ್ಕೆ ಅನುಗುಣವಾಗಿ ಇಂಗ್ಲೀಷ್, ಫ್ರೆಂಚ್ ನೌಕೆಗಳ ಮಧ್ಯೆ ದಕ್ಷಿಣ ಭಾರತದ ಸಮುದ್ರ ತೀರದಲ್ಲಿಯೂ ಯುದ್ಧ ನಡೆಯ ತೊಡಗಿತು.

ರಾಬರ್ಟ್ ಕ್ಲೈವ್ ಎಂಬ ಸಾಹಾಸೀ ಯುವಕನ ಕಾರಣದಿಂದ ಆಂಗ್ಲೇಯರಿಗೆ ಅದೃಷ್ಟ ಕೂಡಿ ಬಂತು. ತುಂಬಾ ದುಡುಕು ಗುಣದವನಾದ ಕ್ಲೈವ್, ತನ್ನ ಹದಿನೆಂಟನೆಯ ವಯಸ್ಸಿನಲ್ಲಿ ಮನೆಯಿಂದ ಓಡಿ ಹೋಗಿ, ಈಸ್ಟಿಂಡಿಯಾ ಕಂಪೆನಿಯಲ್ಲಿ ಗುಮಾಸ್ತನಾಗಿ ಸೇರಿದನು. ಆ ಮೂಲಕ ಅವನು, ಈಸ್ಟಿಂಡಿಯಾ ಕಂಪೆನಿಯವರ ಸೆಯಿಂಟ್ ಜಾರ್ಜ್‌ಕೋಟೆ ಇರುವ ಚೆನ್ನಪಟ್ಟಣಕ್ಕೆ ಬಂದನು.





ಬಂಗಾಳದಲ್ಲಿ ಯುವಕ ನವಾಬನಾದ ಸುರಾಜುದ್ದೌಲಾ ಆಂಗ್ಲೇಯರನ್ನು ಇದಿರಿಸಿದನು. ಅವನು ತನ್ನ ರಾಜಧಾನಿಯಾದ ಮುರ್ಷಿದಾಬಾದಿನಿಂದ, ಈಸ್ಟಿಂಡಿಯಾ ಕಂಪೆನಿಯ ಕೇಂದ್ರ ರಾಜಧಾನಿಯಾದ ಕಲಕತ್ತೆಯನ್ನು ಮುತ್ತಿಗೆ ಹಾಕಿ ಹಿಡಿದುಕೊಂಡನು. ಕಂಪನಿಯವರ ವಿಲಿಯಂ ಕೋಟೆ ಅವನ ಹಸ್ತಗತವಾಯಿತು.

ಕಲಕತ್ತವು ತಮ್ಮ ಕಕ್ಷೆಯೊಳಗಿನಿಂದ ಜಾರಿ ಹೋದುದರಿಂದ ಭಾರತ ದೇಶದ ಆಂಗ್ಲೇಯರಿಗೆಲ್ಲಾ ಬಹಳ ಚಿಂತೆಯುಂಟಾಯಿತು. ರಾಬರ್ಟ್ ಕ್ಲೈವ್ ಸೈನ್ಯವನ್ನು ಕಲಕತ್ತೆಗೆ ನಡೆಸಿಕೊಂಡು ಹೋದನು. ವಿಲಿಯಂ ಕೋಟೆ ಅವನ ವಶಕ್ಕೆ ಬಂತು. ಸುರಾಜುದ್ದೌಲಾನು ಯುದ್ಧಕ್ಕೆ ಬಂದ ಕೂಡಲೇ ಕ್ಲೈವ್ ಅವನೊಂದಿಗೆ ಸಂಧಿ ಮಾಡಿಕೊಂಡನು. ಆ ಒಪ್ಪಂದದ ಪ್ರಕಾರ ನವಾಬನು ತನ್ನ ರಾಜಧಾನಿಗೆ ಹಿಂದಿರುಗಿ ಹೋದನು.





ಸಿರಾಜುದ್ದೌಲಾ ಹಿಂದಿರುಗಿ ಹೋದ ಕೂಡಲು ಕ್ಲೈವ್, ಅವನ ಸೇನಾನಾಯಕನ ಮೂಲಕ ಮಿರ್ಜಾಫರನಿಗೆ ಅಧಿಕಾರದ ಆಶೆ ತೋರಿಸಿ ತಂತ್ರ ನಡೆಸಿದನು. ಆಕಸ್ಮಾತ್ತಾಗಿ ನವಾಬನೊಂದಿಗೆ ಯುದ್ಧವನ್ನು ಪ್ರಕಟಿಸಲಾಯಿತು. ಆದರೆ ದುಷ್ಟನಾದ ಸೇನಾ ನಾಯಕನು, ಮಿರ್ಜಾಫರನ ಸೈನ್ಯವನ್ನು ಯುದ್ಧ ಮಾಡಲೇ ಆಜ್ಞಾಪಿಸದೆ ಬಿಟ್ಟುಬಿಟ್ಟನು.

ನವಾಬನು ಸೋತು ಹೋದನು. ಮಿರ್ಜಾಫರನ ಭಟರು ಅವನನ್ನು ಹಿಡಿದು ಬಂಧಿಸಿ ಘೋರ ರೀತಿಯಲ್ಲಿ ಕೊಂದರು. ಮಿರ್ಜಾಫರ್ ನವಾಬನಾದನು. ಆದರೂ ಪ್ರಜೆಗಳಿಂದ ಅವನು ವಸೂಲು ಮಾಡುವ ಪ್ರತಿ ದಮ್ಮಡಿಗಳನ್ನೂ ಆಂಗ್ಲೇಯರು ಬರಮಾಡಿಕೊಳ್ಳುತ್ತಿದ್ದರು. ಆ ವಿಧವಾಗಿ ಕ್ಲೈವಿಗೆ ಲಕ್ಷಗಟ್ಟಲೆ ರೂಪಾಯಿಗಳನ್ನು, ಈಸ್ಟಿಂಡಿಯಾ ಕಂಪೆನಿಗೆ ಕೋಟಿಗಟ್ಟಲೆ ರೂಪಾಯಿಗಳನ್ನು ಮಿರ್ಜಾಫರ್ ಕೊಡಬೇಕಾಯಿತು.





ಮೀರ್‌ಜಾಫರನ ಪ್ರವರ್ತನೆ ಸಂತೃಪ್ತಿಕರವಾಗಿಲ್ಲವೆಂದು ತಿಳಿದು ಆಂಗ್ಲೇಯರು ಅವನ ಅಳಿಯ ಮೀರ್‌ಖಾಸೀಂನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದರು. ಮೀರ್‌ಖಾಸೀಂ ಸ್ವತಂತ್ರ ಭಾವದವನಾದುದರಿಂದ ಅವನು ಬ್ರಿಟಿಷರಿಗೆ ತಲೆ ಬಾಗಲಿಲ್ಲ. ಅವರ ನಡುವೆ ತಗಾದೆ ಎದ್ದು ೧೭೬೪ ನೇ ವರ್ಷದಲ್ಲಿ ಬಕ್ಸಾರ್‌ಯುದ್ಧವಾಗಿ ಪರಿಣಮಿಸಿತು. ಮೀರ್‌ಖಾಸೀಂಗೆ ಢಿಲ್ಲೀ ಮೊಗಲ್ ಪಾಲಕನಾದ ಷಾ ಆಲಂನ ಸಹಾಯ ಲಭಿಸಿತು.

ಯುದ್ಧದಲ್ಲಿ ಮೀರ್‌ಖಾಸೀಂ ಸೋತು ಢಿಲ್ಲಿಗೆ ಓಡಿ ಹೋಗಿ ಅಲ್ಲಿ ಬಹಳ ದರಿದ್ರಾವಸ್ಥೆಯಲ್ಲಿ ಸತ್ತನು. ಇಂಗ್ಲೆಂಡಿಗೆ ಹೋದ ಕ್ಲೈವ್ ಮತ್ತೆ ಕ್ಲೈವ್ ಪ್ರಭುವಾಗಿ ಭಾರತ ದೇಶಕ್ಕೆ ತಿರುಗಿ ಬಂದನು, ಅವನು ಬಂಗಾಳ, ಬಿಹಾರ್, ಒರಿಸ್ಸಾ ಪ್ರಾಂತಗಳಿಂದ ತೀರ್ವೆ ವಸೂಲು ಮಾಡುವ ಅಧಿಕಾರವನ್ನು ಮೊಗಲ್ ಪಾಲಕನಿಗೆ ಕೊಡಲು ಒಪ್ಪಿದನು. ಆ ಮೂಲಕ ಕ್ಲೈವಿಗೆ ಅಧಿಕ ಧನ ಲಾಭವಾಯಿತು.






ವೀರೋಚಿತ ಸ್ವಾಗತವನ್ನು ಆಶಿಸಿಕೊಂಡು ಕ್ಲೈವ್ ಇಂಗ್ಲೆಂಡಿಗೆ ತಿರುಗಿಹೋದನು. ಆದರೆ ಅವನ ಲಂಚಕೋರತನ, ಭಾರತದೇಶದಲ್ಲಿ ಮಾಡಿದ ದ್ರೋಹ ತೋರಿಸಿದ ಕ್ರೌರ್ಯ ಇವೆಲ್ಲ ಬೃಹದಾಕಾರವಾಗಿ ನಿರಸನೆಗೆ ದೂಡಿದುವು. ಅನೇಕರು ಅವನನ್ನು ದ್ವೇಷಿಸ ತೊಡಗಿದರು. ಇದನ್ನು ತಾಳಲಾಗದೆ ಕ್ಲೈವ್ ಕತ್ತಿಯಿಂದ ತಿವಿದುಕೊಂಡು ಸತ್ತು ಹೋದನು, ಆದರೂ ಭಾರತ ದೇಶದಲ್ಲಿ ಬ್ರಿಟಿಷ್ ಪಾಲನೆಗೆ ಬುನಾದಿ ಹಾಕಿದವನು ಕ್ಲೈವ್.



# ವಿಶ್ವಾಸದವನು

ಒಂದು ಊರಿನೊಳಗಿನ ಮನೆಯಲ್ಲಿ ಲೋಪರಾಜನೆಂಬ ಧನಿಕನಿದ್ದನು. ಶರಭನೆಂಬೊಬ್ಬ ಅನಾಥನು ಅವನ ಮನೆಯಲ್ಲಿ ಸೇವಕನಾಗಿದ್ದನು. ಅವನಿಗೆ ಬ್ರಹ್ಮಕಿವುಡು. ಲೋಪರಾಜನು ಅವನಿಗೆ ಕೆಲಸ ಹೇಳಬೇಕಾಗಿ ಬಂದಾಗ ಗಟ್ಟಿಯಾಗಿ ಕೂಗಿ ಹೇಳಬೇಕಾಗಿತ್ತು. ಒಂದೊಂದು ಸಾರಿ ಅಷ್ಟು ಕೂಗಿ ಹೇಳಿದರೂ ಸಹಾ ಯಜಮಾನನು ಹೇಳಿದ್ದೊಂದಾದರೆ ಅವನು ಮಾಡುವುದು ಇನ್ನೊಂದಾಗಿತ್ತು. ಆದರಿಂದ ಶರಭನು ಮತ್ತೊಮ್ಮೆ ಕೆಲಸ ಮಾಡಬೇಕಾಗುತಿತ್ತು. ಆದರೂ ಲೋಪರಾಜನು ಅವನನ್ನು ಬಯ್ಯುತ್ತಿದ್ದಿಲ್ಲ.

ಲೋಪರಾಜನ ಮಗನ ಹೆಸರು ವೀರರಾಜ. ಅವನಿಗೆ ಮಾತ್ರ, ಶರಭನೆಂದರೆ ಸ್ವಲ್ಪವೂ ಹಿಡಿಸುತ್ತಿದ್ದಿಲ್ಲ. ಅವನು ಆಗಾಗ ತಂದೆಯೊಂದಿಗೆ, "ಈ ಶತ ಕಿವುಡನೊಂದಿಗೆ ಕೂಗಿಕೂಗಿ ಸಾಕಾಯಿತಪ್ಪಾ. ನಮಗೇಕೆ ಈ ಕಷ್ಟ? ಯಾವ ಸಣ್ಣ ಕೆಲಸ ಹೇಳಬೇಕಾದರೂ ದೊಂಡೆ ಹರಿಯುವ ಹಾಗೆ ಕಿರಿಚಬೇಕು. ಅವನೇನು ನಮಗೆ ಸುಮ್ಮನೆ ಕೆಲಸ ಮಾಡುವುದಿಲ್ಲವಷ್ಟೆ? ಇವನೇ ನಮ್ಮಲ್ಲಿರಬೇಕೆಂಬ ಶಾಸನವಿದೆಯೆ? ಹಾಗಿರುವಾಗ ಅವನನ್ನು ತೆಗೆದು ಹಾಕಿ ಬೇರೊಬ್ಬನನ್ನು ಇಟ್ಟುಕೊಳ್ಳುವುದೇ ಒಳ್ಳೇದು" ಎನ್ನುತ್ತಿದ್ದನು.

ಲೋಪರಾಜನು ಅದಕ್ಕೆ ಒಪ್ಪದೆ, "ಕಿವುಡನಾದರೂ ಅವನು ತುಂಬಾ ನಂಬಿಗಸ್ಥನಪ್ಪಾ, ಬಹಳ ಕಾಲದಿಂದ ನಮ್ಮನ್ನೇ ನಂಬಿಕೊಂಡು ಕೆಲಸಮಾಡಿ ಬದುಕಿಕೊಂಡಿದ್ದಾನೆ. ಅವನು ಬೇಕೆಂತಲೇ ಯಾವ ತಪ್ಪನ್ನೂ ಮಾಡುವುದಿಲ್ಲವಷ್ಟೆ? ಆದುದರಿಂದ ಅವನನ್ನು ಕೆಲಸದಿಂದ ತೆಗೆದು ಹಾಕುವುದೇನೂ ನ್ಯಾಯವಲ್ಲ" ಎಂದು ಹೇಳುವನು.

ನಿಜಕ್ಕೂ ಶರಭನು ವೀರರಾಜನ ಹತ್ತಿರವೂ ವಿನಯ ವಿಧೇಯತೆಗಳನ್ನೇ ತೋರಿಸುತ್ತಿದ್ದನು. ಆದರೂ ವೀರರಾಜನಿಗೆ ಅವನನ್ನು ನೋಡಿದರೆ ಮೈಯೆಲ್ಲಾ ಉರಿಯುತ್ತಿತ್ತು. ಹೇಗಾದರೂ ಸಮಯ ಸಿಕ್ಕಿದಾಗ ಅವನನ್ನು ಕೆಲಸದಿಂದ ತೆಗೆದು ಹಾಕಬೇಕೆಂದು ತನ್ನಲ್ಲಿ ನಿಶ್ಚಯಿಸಿಕೊಂಡಿದ್ದನು.

ಕಡೆಗೆ ಒಂದು ದಿನ ಲೋಪರಾಜನು ಹೆಂಡತಿಯೊಂದಿಗೆ ತೀರ್ಥಯಾತ್ರೆಗೆ ಹೊರಟು, ಮನೆಯ ಅಧಿಕಾರ ಬಾಧ್ಯತೆಗಳನ್ನೆಲ್ಲಾ ಮಗನಿಗೆ ಒಪ್ಪಿಸಿ

**ಯಂ. ವಿ. ಕಿಷನ್**



ಹೋದನು. ಸೇವಕ ಶರಭನನ್ನು ತೊಲಗಿಸಲಿಕ್ಕೆ ಇದಕ್ಕಿಂತ ಒಳ್ಳೆಯ ಸಮಯ ದೊರಕದೆಂದು ವೀರರಾಜನಿಗೆ ತೋರಿತು. ತಂದೆತಾಯಿಗಳು ಹೊರಟು ಹೋದ ಮರುದಿನವೇ ವೀರರಾಜನು ಶರಭನ ಲೆಕ್ಕ ಮುಗಿಸಿ ಕೆಲಸದಿಂದ ತೆಗೆದು ಹಾಕಿ, ಮನೆಯಿಂದ ಹೊರಡಿಸಿ ಬಿಟ್ಟನು.

ತನ್ನಿಂದ ಏನು ತಪ್ಪಾಯಿತೋ ? ಏಕೆ ನೌಕರಿ ಹೋಯಿತೋ? ಶರಭನಿಗೆ ಅರ್ಥವಾಗಲಿಲ್ಲ. ವೀರರಾಜನು ಬಹಳ ಸಿಟ್ಟಿನ ಮನುಷ್ಯನೆಂಬುದಷ್ಟು ಅವನಿಗೆ ಗೊತ್ತಿತ್ತು. ಆ ಕಾರಣದಿಂದ ಅವನು ಸಣ್ಣ ಯಜಮಾನನ ಹತ್ತಿರ ಏನೂ ಪ್ರಶ್ನೆ ಮಾಡದೆ ತನ್ನ ಗಂಟು ಎತ್ತಿಕೊಂಡು ಹೊರಟುಹೋದನು.

ಆಮೇಲೆ ಶರಭನು ಗ್ರಾಮದಲ್ಲಿ ಬೇರೆಲ್ಲಿಯಾದರೂ ನೌಕರಿ ದೊರಕುವುದೇನೋ ಎಂದು ಪ್ರಯತ್ನ ಮಾಡಿದನು. ಆದರೆ ಯಾರೂ ಅವನಿಗೆ ಕೆಲಸ ಕೊಡಲು ಇಷ್ಟಪಡಲಿಲ್ಲ. ಕೆಲವರು "ಲೋ ! ನಿನಗೆ ಮೊದಲೇ ಬ್ರಹ್ಮ ಕಿವುಡು. ಆದರ ಜತೆಗೆ ಕಳ್ಳ ಬುದ್ಧಿಯೂ ಇದೆಯಂತಲ್ಲಾ ? ಅದಕ್ಕೇ ವೀರರಾಜನು ನಿನ್ನನ್ನು ಕೆಲಸದಿಂದ ತೆಗೆದು ಹಾಕಿದ್ದಾನೆ" ಎಂದು ಅರಚಿ ಹೇಳಿದರು.

ನೌಕರಿ ಹೋದುದಕ್ಕಿಂತಲೂ ಕಳ್ಳ ಬುದ್ಧಿಯುಳ್ಳವನೆಂಬ ಮಾತು ಶರಭನನ್ನು ತುಂಬಾ ನೋಯಿಸಿತು. ವೀರರಾಜನು ತನ್ನ ಮೇಲೆ ಏನೋ ಕಳ್ಳತನದ ಹೊರೆಯನ್ನು ಹೇರಿದ್ದಾನೆಂದು ಅವನಿಗೆ ಅರ್ಥವಾಯಿತು. ಎಲ್ಲಿಯೂ ಸ್ಥಿರವಾದ ಕೆಲಸ ದೊರಕದೆ ಹೋದುದರಿಂದ, ಅವನು ದಿನಾ ಕೂಲಿ ಕೆಲಸಮಾಡಿಕೊಂಡು ಬದುಕ ತೊಡಗಿದನು.

ಒಂದು ದಿನ ಅವನು ಮಾರುದ್ದ ಹೊತ್ತೇರಿದ ಸಮಯದಲ್ಲಿ ಬೀದಿಯಲ್ಲಿ ಹೋಗುತ್ತಿರುವಾಗ ಪಕ್ಕದ ಸಂದಿನೊಳಗಿನಿಂದ ಎರಡು ಗೂಳಿಗಳು ತಮ್ಮೊಳಗೆ ರೋಷದಿಂದ ತಲೆತಲೆ ಕುಟ್ಟಾಡಿ ಹಾಯ್ದುಕೊಂಡು ಬೀದಿಗೆ ಬಂದುವು. ಅದೇ ಸಮಯದಲ್ಲಿ ವೀರರಾಜನ ಐದು ವಯಸ್ಸಿನ ಮಗ ಶಾಲೆಗೆ ಹೋಗುತ್ತ ಅಚೆಯ ಸಂದಿನಿಂದ ಬೀದಿಗೆ ಬಂದನು.

ಗೂಳಿಗಳು ಧೂಳೆಬ್ಬಿಸಿಕೊಂಡು ಹಿಂದೆ ಮುಂದೆ ಹೋಗುವುದನ್ನು ನೋಡಿ, ಅಲ್ಲಲ್ಲಿ ಮನೆಗಳ ಜಗಲಿಗೇರಿಕೊಂಡ ಕೆಲವರು ಆ ಹುಡುಗನನ್ನು ನೋಡಿ, "ಅಯ್ಯೋ ವೀರ್ರಾಜನ ಹುಡುಗ !" ಎಂದು ಕೂಗಿಕೊಂಡರು. ಆದರೆ ಒಬ್ಬರೂ ಅವನನ್ನು ಕಾಪಾಡಲು ಜಗಲಿ ಇಳಿದು ಬರುವ ಧೈರ್ಯ ಮಾಡಲಿಲ್ಲ. ನಿಂತಲ್ಲೇ ಚಡಪಡಿಸಿಕೊಂಡಿದ್ದರು.

ಸ್ವಲ್ಪ ದೂರದಲ್ಲಿ ಅದನ್ನು ನೋಡಿದ ಕಿವುಡು ಶರಭನು ಓಡೋಡುತ್ತ ಗೂಳಿಗಳ ಕಾಲಡಿಗೆ ಬೀಳಲಿದ್ದ ಹುಡುಗನನ್ನು ಎಳೆದು ಹಾಕಿ ಹೆಗಲಿಗೇರಿಸಿಕೊಂಡು ಪಕ್ಕದಲ್ಲಿದ್ದೊಂದು ಮನೆಯ ಮೆಟ್ಟಿಲನ್ನೇರಿ ಮುಗ್ಗುರಿಸಿ ಬಿದ್ದನು. ಆಗ ವೀರರಾಜನ ಮಗನಿಗೆ ಏನೂ ಆಗದಿದ್ದರೂ, ಶರಭನಿಗೆ ಮಾತ್ರ

ಕಾಲಗಂಟಿಗೆ ಪೆಟ್ಟಾಗಿ ಏಳಲಾಗದಂತೆ ಉಳುಕಿ ಕೊಂಡಿತು. ಕಾಲನ್ನು ನಡುಗಿಸುತ್ತ ನರಳತೊಡಗಿದನು.

ತನ್ನ ಮಗನು ಪ್ರಾಣಾಪಾಯದಿಂದ ಹೊರಬಿದ್ದ ನೆಂಬ ಸಂಗತಿಯನ್ನು ಕೇಳಿ, ವೀರರಾಜನು ಗಾಬರಿ ಯಾಗಿ ತರಾತುರಿಯಿಂದ ಅಲ್ಲಿಗೆ ಬಂದು, ನೋವಿನಿಂದ ಮೂಲುಗಿಕೊಂಡಿರುವ ಶರಭನನ್ನೂ, ಪಕ್ಕದಲ್ಲಿ ಬೆದರಿಕೊಂಡು ನಿಂತಿರುವ ಮಗನನ್ನೂ ನೋಡಿದನು. ಆ ಸಮಯಕ್ಕೆ ಗೂಳಿಗಳೆರಡೂ ಇನ್ನೂ ಹಾಯ್ದಾಡಿ ಕೊಳ್ಳುತ್ತ ಪಕ್ಕದ ಸಂದಿನೊಳಗೆ ಓಡಿದುವು.

ಅಲ್ಲಿ ಸೇರಿದ ಜನರಿಂದ ನಡೆದ ಸಂಗತಿ ಏನೆಂದು ವೀರರಾಜನಿಗೆ ತಿಳಿಯಿತು. ಶರಭನ ಮೇಲೆ ಕರುಣೆ ಉಕ್ಕಿ ಪಶ್ಚಾತ್ತಾಪದಿಂದ ಕಣ್ಣೀರು ತುಂಬಲು, ಅವನನ್ನು ಎರಡು ಕೈಗಳಿಂದಲೂ ಎತ್ತಿ ಕುಳ್ಳಿರಿಸಿ, "ಎಲೋ, ನಾನು ಹೇಳುವ ಮಾತು ನಿನಗೆ ಕೇಳ ಲಾರದು. ಆದರೂ ಪರವಾಗಿಲ್ಲ. ನಿನಗೆ ಕಳ್ಳಬುದ್ಧಿ ಇದೆ ಎಂದು ಹೇಳಿದ್ದು ಸುಳ್ಳು. ನನ್ನದು ಕಪಟ ಬುದ್ಧಿ ಎಂಬ ಮಾತು ನಿಜ. ಕೆಲಸದಿಂದ ತೆಗೆದು ಹಾಕಿದೆನೆಂಬ ಕೋಪವೇನೂ ಇಲ್ಲದೆ ನೀನು ಜೀವ ದಾಸೆಬಿಟ್ಟು ನನ್ನ ಮಗನನ್ನು ಕಾಪಾಡಿದಿ. ನಮ್ಮ ಅಪ್ಪನು ಹೇಳಿದ ಮಾತು ನಿಜ. ನೀನು ಎಷ್ಟು ವಿಶ್ವಾಸ ಪಾತ್ರನೆಂಬುದು ಈಗ ನನಗೆ ಗೊತ್ತಾಯಿ ತಪ್ಪ" ಎಂದು ನಡೆಯಲಾಗದ ಶರಭನನ್ನು, ಇಬ್ಬರು ಮನುಷ್ಯರನ್ನು ಕರೆದು, ಅವರ ಸಹಾಯದಿಂದ ತನ್ನ ಮನೆಗೆ ಸಾಗಿಸಿಕೊಂಡು ಹೋದನು.

ಮತ್ತೊಂದು ವಾರದ ಮೇಲೆ ಲೋಪರಾಜನು ತೀರ್ಥಯಾತ್ರೆ ಮುಗಿಸಿಕೊಂಡು ಮನೆಗೆ ಹಿಂದಿರುಗಿ ಬಂದನು. ಮನೆಗೆ ತಲಪುವಾಗ ಅವನ ಕಣ್ಣಿಗೆ ಬಿದ್ದ ದೃಶ್ಯ ಆಶ್ಚರ್ಯವನ್ನೂ ಆನಂದವನ್ನೂ ಉಂಟು ಮಾಡುವಂತಹುದಾಗಿತ್ತು. ಕುಂಟುತ್ತಾ ನಡೆಯುವ ಶರಭನನ್ನು ವೀರರಾಜನು ಕೈ ಹಿಡಿದುಕೊಂಡು ಬೀದಿ ಬಾಗಿಲಿಗೆ ಕರೆದುಕೊಂಡು ಬರುತ್ತಿದ್ದನು.

"ಏನಾಯಿತು ಇವನಿಗೆ? ನೀನೇ ಕೈಯಾಸರೆ ಕೊಟ್ಟು ನಡೆಯಿಸುವಿಯಲ್ಲ? ಇವನ ಕಿವುಡುತನ ದೊಂದಿಗೆ ನಾವು ಬಡಕೊಂಡಿರುವುದು ಸಾಲದೆ, ಕುಂಟುತನವೂ ಬಂತೇನು? ಎಲ್ಲಿ ಬಿದ್ದ" ಎಂದನು ಲೋಪ ರಾಜ.

"ಶರಭನು ಕಿವುಡನೂ ಕುಂಟನೂ ಆದರೇನು ಅಪ್ಪಾ? ನಮ್ಮ ಕುಟುಂಬದ ಮೇಲೆ ಅವನಿಗೆ ಎಷ್ಟು ವಿಶ್ವಾಸ! ಅಳತೆಯೇ ಇಲ್ಲ!" ಎಂದು ವೀರರಾಜನು ನಡೆದ ಸಂಗತಿಯನ್ನೆಲ್ಲಾ ಹೇಳಿದನು.

ತನ್ನ ಮೊಮ್ಮಗನಿಗೆ ಗಂಡಾಂತರ ತಪ್ಪಿದುದಕ್ಕೂ, ಶರಭನ ಮೇಲೆ ತನ್ನ ಮಗನಿಗಿದ್ದ ಕೋಪವು ಹೋದುದಕ್ಕೂ ಲೋಪರಾಜನಿಗೆ ಬಹಳ ಸಂತೋಷ ವಾಯಿತು.



# ಜಿಪುಣಾಗ್ರೇಸರ

**ದೊ**ಡ್ಡ ಜಿಪುಣನಾದ ಪಟ್ಟಾಭಿ ಆಯುಷ್ಯ ತೀರಿ ಸತ್ತ ಕೂಡಲೇ ಕ್ಷಣ ಮಾತ್ರದಲ್ಲಿ ಸ್ವರ್ಗದ ಬಾಗಿಲ ಹತ್ತಿರ ಹೋದನು.

ದ್ವಾರಪಾಲಕರು ಅವನನ್ನು ನೋಡಿ ಆಶ್ಚರ್ಯ ಪಡುತ್ತ, "ನೀನು ಇಲ್ಲಿಗೆ ಬಂದದ್ದು ವಿಚಿತ್ರವಾಗಿದೆಯಲ್ಲಾ ? ಯಮದೂತರು ತಪ್ಪಿ ಕಳಿಸಿರಬೇಕು. ಎಂಥ ಪುಣ್ಯ ಮಾಡಿದ್ದಿ ನೀನು ?" ಎಂದು ಕೇಳಿದರು.

ಪಟ್ಟಾಭಿ ಅವರನ್ನು ಹುಬ್ಬು ಸುರುಗಿಸಿ ನೋಡಿ, "ಒಂದು ಸಾರಿ ದೇವರ ಉತ್ಸವದ ದಿನ ದಾರಿಯಲ್ಲಿ ಸಿಕ್ಕಿದ ಒಂದು ದಮ್ಮಡಿಯನ್ನು, ಒಬ್ಬಳು ಭಿಕ್ಷುಕಿಗೆ ದಾನ ಮಾಡಿದ್ದೆನಲ್ಲಾ ! ಆ ಪುಣ್ಯದ ವಿವರಗಳೆಲ್ಲ ಚಿತ್ರಗುಪ್ತರ ದಪ್ತರದಲ್ಲಿದೆ. ಬೇಕಾದರೆ ಕೇಳಿನೋಡಿ" ಎಂದನು.

ದ್ವಾರ ಪಾಲಕರು ಪಟ್ಟಾಭಿಯನ್ನು ಚಿತ್ರಗುಪ್ತರ ಬಳಿಗೆ ಕರೆದುಕೊಂಡು ಹೋಗಿ ಏನು ಸಂಗತಿ ಎಂದು ಕೇಳಿದರು.

ಚಿತ್ರಗುಪ್ತರು ಪಟ್ಟಾಭಿಯೊಂದಿಗೆ, "ನಿನಗೆ ಸಿಕ್ಕಿದ ದಮ್ಮಡಿಗೆ ಸಂಬಂಧಿಸಿದ ಪುಣ್ಯದಿಂದಲೇ ನೀನು ಕೆಲವು ಕ್ಷಣ ಸ್ವರ್ಗದ ಬಾಗಿಲು ನೋಡಿದಿ. ಇನ್ನು ನಿನಗೆ ನರಕವೇ !" ಎಂದರು.

ಕೂಡಲೇ ಪಟ್ಟಾಭಿ, "ಹಾಗೆ ನರಕಕ್ಕೆ ಹೋಗ ಬೇಕಾದರೆ ಆ ದಮ್ಮಡಿ ನಿಮ್ಮ ಹತ್ತಿರ ಕೊಳೆಯುವುದೇಕೆ ? ಕೊಟ್ಟು ಬಿಡಿ ನನ್ನ ಕೈಗೇ !" ಎಂದು ಚಿತ್ರಗುಪ್ತರಿಂದ ಅದನ್ನು ವಸೂಲು ಮಾಡಿಕೊಂಡೇ ನರಕಕ್ಕೆ ಹೋದನು ಪಟ್ಟಾಭಿ.





# ಸುಕುಮಾರಿ

ಒಂದು ಕಾಲದಲ್ಲಿ ವಿದೇಹ ದೇಶದ ರಾಜನಿಗೆ ವಜ್ರ ಪ್ರಭೆ ಎಂಬ ಕುಮಾರಿ ಇದ್ದಳು. ಒಂದು ದಿನ ಅವಳು ಉದ್ಯಾನದಲ್ಲಿ ತನ್ನ ದಾಸಿಗೆಳತಿಯರೊಂದಿಗೆ ಏನೇನೋ ಆಟಗಳನ್ನಾಡಿ, ಇದ್ದಕ್ಕಿದ್ದ ಹಾಗೆ, "ಅಬ್ಬ! ಸಾಕಾಯಿತಪ್ಪ!" ಎಂದು ಬಳಲಿಕೆಯ ಉಸಿರುಬಿಟ್ಟು ಅಂತಃಪುರಕ್ಕೆ ಹಿಂದಿರುಗಿ ಉಸ್ಸೆಂದು ಕುಳಿತಳು. ಅದನ್ನು ನೋಡಿ ಗೆಳತಿಯರು ಗಾಬರಿಯಾಗಿ ಅವಳಿಗೆ ಸಪರ್ಯೆಗಳನ್ನು ಮಾಡ ತೊಡಗಿದರು.

ಹಂಸತೂಲಿಕಾ ತಲ್ಪದಲ್ಲಿ ವಿಶ್ರಮಿಸಿಕೊಂಡಿದ್ದ ವಜ್ರಪ್ರಭೆ ತನಗೆ ಸೇವೆಗಳನ್ನು ಮಾಡುವ ಮೂವರು ದಾಸಿಗೆಳತಿಯರನ್ನು ನೋಡಿ ಮುಗುಳು ನಗುತ್ತ, "ಈಗೊಂದು ಪ್ರಶ್ನೆ ಕೇಳುತ್ತೇನೆ. ನಾನು ಇಷ್ಟು ಬಳಲಿ ಹೋಗಲು ನಿಜವಾದ ಕಾರಣ ಏನೆಂದು ನಿಮ್ಮಲ್ಲಿ ಯಾರು ಸರಿಯಾಗಿ ಹೇಳುವಳೋ ಅವಳಿಗೆ ನನ್ನ ರತ್ನಹಾರವನ್ನು ಬಹುಮಾನವಾಗಿ ಕೊಡುತ್ತೇನೆ" ಎಂದಳು.

ದಾಸಿಯರು ಮುಖ ಮುಖ ನೋಡಿಕೊಂಡರು. "ಒಂದು ವೇಳೆ ಸರಿಯಾದ ಕಾರಣ ಹೇಳದಿದ್ದರೆ? ಏನು ಮಾಡುವಿರಿ? ಅದೂ ತಿಳಿದರೆ ಒಳ್ಳೇದಿತ್ತು." ಎಂದು ಮರೀಚಿಕೆ ಎಂಬ ದಾಸಿ ಕೇಳಿದಳು.

"ಆಗ ರತ್ನಹಾರಕ್ಕೆ ಬದಲು ಅವಳ ಎರಡು ದವಡೆಗಳೂ ಬಾತು ಹೋಗುವ ಹಾಗೆ ಬಾರಿಸುತ್ತೇನೆ" ಎಂದಳು ವಜ್ರಪ್ರಭೆ.

"ಹಾಗಾದರೆ ನನ್ನ ಅದೃಷ್ಟವನ್ನು ಪರೀಕ್ಷಿಸುತ್ತೇನೆ" ಎಂದು ಮರೀಚಿಕೆ ರಾಜಕುಮಾರಿಯೊಂದಿಗೆ "ಯುವರಾಣಿಯವರು ಅಷ್ಟೊಂದು ಬಳಲಿ ಹೋಗಲು ಕಾರಣವೇನಂದರೆ, ಉದ್ಯಾನದಲ್ಲಿ ಪ್ರವೇಶಿಸಿದ ಕೂಡಲೇ ಕಣ್ಣು ಮುಚ್ಚಾಲೆಗೆ ಶುರು ಮಾಡಿದ್ದೇ. ಸೂರ್ಯನು ನೆತ್ತಿಯವರೆಗೆ ಬಂದರೂ ಉದ್ಯಾನದೊಳಗೆಲ್ಲಾ ಹಾಗೆ ಓಡಿಕೊಂಡಿದ್ದರೆ ಬಳಲಿಕೆ ಬಾರದೆ ಮತ್ತೇನಾದೀತು? ತಾವಾದುದರಿಂದ ಅಷ್ಟು ಶ್ರಮವನ್ನು ತಡೆದುಕೊಳ್ಳಲು ಸಾಧ್ಯವಾಯಿತು. ಇನ್ನೊಬ್ಬರಾದರೆ ಯಾವಾಗಲೋ ಮೂರ್ಛೆ ಬೀಳುತ್ತಿದ್ದರು" ಎಂದಳು. ವಜ್ರಪ್ರಭೆ ಕೋಪದಿಂದ ಎದ್ದುಬಂದು ಮರೀಚಿಕೆಯ ಗಲ್ಲಗಳ ಮೇಲೆ ಚಟೀಲನೆ ಹೊಡೆದಳು. ಅದನ್ನು ನೋಡಿ ಉಳಿದಿಬ್ಬರು ದಾಸಿಯರೂ ಕಿಲಕಿಲನೆ ನಕ್ಕರು.

ಕಮಲಿನಿ



ಸ್ವಲ್ಪ ಹೊತ್ತಿನ ಮೇಲೆ ಮರುದ್ವತಿ ಎಂಬ ದಾಸಿಗೆಳತಿ, "ನಾನು ಹೇಳುತ್ತೇನೆ. ಯುವರಾಣಿಯವರು ಅಷ್ಟೊಂದು ಬಳಲಿ ಹೋದರೆಂದರೆ, ಅದಕ್ಕೆ ಕಾರಣ ಸರೋವರದಲ್ಲಿ ಹೆಚ್ಚು ಹೊತ್ತು ಈಜಾಡಿದುದೇ. ಅಷ್ಟು ಹೊತ್ತು ಈಜಲು ಗಂಡುಸರಿಗೂ ಸಾಧ್ಯವಾಗದು. ನೀವಾದುದರಿಂದ ಚೆನ್ನಾಗೇ ಈಜಿದಿರಿ. ಕಣ್ಣು ಮುಚ್ಚಾಲೆಗೆ ಓಡಾಡಿದ ಶ್ರಮದ ಮೇಲೆ, ನೀರಿನಲ್ಲಿ ಈಜಾಡಿದ್ದು ಸ್ವಲ್ಪ ಹೆಚ್ಚಾಯಿತು" ಎಂದಳು.

ವಜ್ರಪ್ರಭೆ ಕೋಪದಿಂದ ಅವಳ ದವಡೆಗಳನ್ನೂ ಬಾರಿಸಿ ಬಿಟ್ಟಳು. ಆಮೇಲೆ ಮಂತಾಕಿನಿ ಎಂಬ ಮೂರನೇ ದಾಸಿ, "ಅದೆಲ್ಲಾ ಅಲ್ಲ. ಯುವರಾಣಿಯವರು ಅಷ್ಟೊಂದು ಬಳಲಿ ಹೋಗಲು ಕಾರಣ ಓಡಿದ್ದೂ ಈಜಿದ್ದೂ ಅಲ್ಲ. ನಾನೊಬ್ಬಳು ಅದನ್ನು ಕಂಡು ಹಿಡಿದಿದ್ದೇನೆ. ಅವರು ಗಿಡಗಳಿಂದ ಒಂದು ಬೊಗಸೆ ಹೂಗಳನ್ನು ಸ್ವತಃ ಕೊಯ್ದದ್ದೇ. ಒಂದು ಮಾಲೆಗೆ ಬೇಕಾಗುವಷ್ಟು ಹೂ ತಾನೇ ಕೊಯ್ಯುವೆನೆಂದರು. ಅವುಗಳನ್ನು ಮಾಲೆಯಾಗಿ ಕಟ್ಟುವಂತೆ ನನಗೆ ಕೊಡುವಾಗಲೇ ಅವರು ಬಳಲಿದ್ದಾರೆಂದು ನನಗೆ ಗೊತ್ತಾಯಿತು. ನಿಮಗೆ ಅದು ಗೊತ್ತಾಗಲಿಲ್ಲ" ಎಂದಳು.

ಮಂದಾಕಿನಿಯ ಮಾತು ಮುಗಿದ ಮರುಕ್ಷಣವೇ ವಜ್ರಪ್ರಭೆ ಸಂತೋಷದಿಂದ ಶಯ್ಯೆಯಿಂದೆದ್ದು, ತನ್ನ ಕೊರಳಲ್ಲಿದ್ದ ರತ್ನಹಾರವನ್ನು ಮಂದಾಕಿನಿಯ ಕೊರಳಿಗೆ ಹಾಕಿದಳು. ಅದನ್ನು ನೋಡಿ ಉಳಿದಿಬ್ಬರಿಗೂ ಆಶ್ಚರ್ಯವಾಯಿತು.

ಸ್ವಲ್ಪ ಹೊತ್ತಿಗೆ ವಜ್ರಪ್ರಭೆ ಮಲಗಿ ನಿದ್ರಿಸಿದಳು. ಆ ಸಮಯ ನೋಡಿ ಮರೀಚಿಕೆಯೂ ಮರುದ್ವತಿಯೂ ಮಂದಾಕಿನಿಯ ಕೈ ಹಿಡಿದು ಅಂತಃಪುರದ ಒಂದು ಮೂಲೆಗೆ ಎಳೆದುಕೊಂಡು ಹೋಗಿ, "ಏನೇ ಮಂದಾಕಿನಿ, ನಮ್ಮ ರಾಜಕುಮಾರಿಯ ರೂಪರೇಖೆ ವಿಲಾಸಗಳೆಲ್ಲ ಎಂತಹುದೆಂದು ನಿನಗೆ ಗೊತ್ತಿಲ್ಲದ್ದೇನಲ್ಲವಷ್ಟೆ? ಸ್ಥೂಲವಾಗಿದ್ದರೂ ಮೊರಟಾಗಿ ಕಾಣದವರನ್ನು ನಾವು ಬಲ್ಲೆವೇ ಹೊರತು, ರಾಜಕುಮಾರಿ ಸ್ಥೂಲ ಶರೀರದವಳು ಮಾತ್ರವಲ್ಲದೆ, ಸ್ವಲ್ಪ ಮೊರಟು ಗುಣದವಳು ಅಂತ ನೀನೇ ಒಮ್ಮೆ ಹೇಳಿರುವಿ, ನೆನಪಿದೆಯೆ?" ಎಂದು ಕೇಳಿದರು.

"ಹೌದು. ನಿಜವೇ ' ಅದರಿಂದೇನಾಯಿತು?" ಎಂದು ಕೇಳಿದಳು ಮಂದಾಕಿನಿ.

"ಹಾಗಿರುವಂಥಾ ರಾಜಕುಮಾರಿ ಒಂದು ಬೊಗಸೆ ಹೂ ಕೊಯಿದ ಕೂಡಲೇ ಬಳಲಿ ಹೋಗುತ್ತಾಳೇನು? ಅಷ್ಟೊಂದು ಸುಕುಮಾರಿಯೋ ಅವಳು? ನೀನು ಅವಳನ್ನು ಒಳಿತು ಮಾಡಿಕೊಳ್ಳಲಿಕ್ಕಾಗಿ ಬೇಕೆಂತಲೇ ಸುಳ್ಳು ಹೇಳಿದಿ!" ಎಂದು ದಾಸಿಯರಿಬ್ಬರೂ ಮಂದಾಕಿನಿಯನ್ನು ಮಾತುಗಳಿಂದ ತಿವಿಯತೊಡಗಿದರು.

ಮಂದಾಕಿನಿ ಒಂದು ಅರ್ಧ ನಿಮಿಷ ಸುಮ್ಮ ನಿದ್ದು, ಕಿರುನಗುತ್ತ, "ನಾನು ಹೇಳಿದ್ದರಲ್ಲಿ ಸುಳ್ಳೇ ನಿಲ್ಲ. ಇತರರ ಮನಸ್ಸು ನೋವಾಗದಂತಹ ಮಾತು ಗಳನ್ನೇ ಹೇಳಬೇಕು. ಸಾಧಾರಣವಾಗಿ ರಾಜ ಕುಮಾರಿಯರು ಲಾವಣ್ಯತೆಯಿಂದ ಕುಸುಮ ಕೋಮಲೆಯರಾಗಿರುತ್ತಾರೆಂದು ಎಲ್ಲರೂ ಅಂದು ಕೊಳ್ಳುತ್ತಾರೆ ಹೌದಾ? ಆದರೆ ನಮ್ಮ ರಾಜ ಕುಮಾರಿ ಅದಕ್ಕೆ ಪೂರ್ತಿ ಭಿನ್ನವೇ. ಆ ಸಂಗತಿ ಅವಳಿಗೇ ಗೊತ್ತಿದೆ. ಆದ್ದರಿಂದಲೇ ಅವಳು ತನ್ನ ರೂಪವನ್ನು ಯಾರಾದರೂ ಸೂಚಿಸುವ ಹಾಗೆ ಮಾತಾಡಿದರೆ ಅವಳು ಸಹಿಸಲಾರಳು ಅದನ್ನೇ ಅವಳು ಪರೀಕ್ಷಿಸಿದ್ದು." ಎಂದಳು.

"ಅಂದರೆ ಮೊದಲು ನಾವು ಅವಳೊಂದಿಗೆ ಮಾತಾಡುವಾಗ, ಅವಳು ಸ್ಥೂಲಕಾಯದ ಮೊರಟ ಳೆಂದು ಹೇಳಿದ್ದೇವೆಂದೋ ನೀನು ಹೇಳುವುದು?" ಎಂದು ದಾಸಿಯರಿಬ್ಬರೂ ಕೋಪದಿಂದ ಕೇಳಿದರು.

"ಇಷ್ಟು ಕೋಪವೇಕೆ? ನಾನು ಹೇಳುವುದನ್ನು ಕೇಳಿರಿ" ಎಂದು ಮಂದಾಕಿನಿ ಹೀಗೆಂದಳು:

"ರಾಜಕುಮಾರಿ ಅಷ್ಟೊಂದು ಬಿಸಿಲಿನಲ್ಲಿ ಉದ್ಯಾನದೊಳಗೆಲ್ಲಾ ಓಡುತ್ತಾ, ಕಣ್ಣುಮುಚ್ಚಾಲೆ ಯಾಡಿದಳೆಂದು ಹೇಳಿದಿರಿ. ಅಷ್ಟೇ ಅಲ್ಲದೆ ಸರೋವರದಲ್ಲಿ ಬಹಳ ಹೊತ್ತು ಈಜಾಡಿದಳೆಂಬ ಸಂಗತಿ ಹೇಳಿ, ಅದು ಗಂಡುಸರಿಗೆ ಕೂಡಾ ಸಾಧ್ಯ ವಾಗದೆಂದಿರಿ. ಇದರಿಂದ ಅವಳಿಗೆ ನೀವು ತನ್ನನ್ನು ಸ್ಥೂಲಕಾಯದ ಮೊರಟಳೆಂದು ಸೂಚಿಸುವಿರೆಂದು ತಿಳಿದು ಕೋಪಗೊಂಡು ಹೊಡೆದಳು. ನಾನು ಅವಳ ಮನಸ್ಸಿನೊಳಗಿನ ನೋವನ್ನು ತಿಳಿದಿದ್ದೆ ನಾದುದರಿಂದ, ಒಂದು ಬೊಗಸೆ ಹೂ ಕೊಯಿದ ಮಾತ್ರಕ್ಕೇ ಬಳಲಿ ಹೋದಿರೆಂದೆನು. ಅದು ಅವಳಿಗೆ ತೃಪ್ತಿಯನ್ನುಂಟು ಮಾಡಿತು. ಮನುಷ್ಯರ ಸ್ವಭಾವ ಗಳನ್ನು ಕಂಡು ಹಿಡಿದು ಅರ್ಥಮಾಡಿಕೊಳ್ಳುವ ಇಂಗಿತಜ್ಞಾನ ನಿಮಗಿಲ್ಲದೆ ಬಹುಮಾನಕ್ಕೆ ಬದಲು ಏಟು ತಿಂದಿರಿ. ನೀವು ಒಳ್ಳೆಯ ಸ್ನೇಹಿತೆಯರಾದ್ದ ರಿಂದ ಈ ರತ್ನಹಾರವನ್ನು ನಾವು ಮೂವರೂ ಹಂಚಿಕೊಳ್ಳೋಣ"

ಮಂದಾಕಿಯನಿಯ ಈ ಮಾತಿನಿಂದ ಮರೀಚಿಕೆ, ಮರುದ್ವತಿಯರಿಗೆ ತೃಪ್ತಿಯಾಯಿತು.

"ರಾಜಕುಮಾರಿ ವಜ್ರಪ್ರಭೆಯಂಥವರ ಹತ್ತಿರ ಹೇಗೆ ಪ್ರವರ್ತಿಸಬೇಕೆಂದು ನೀನು ಹೇಳಿದ ಮೇಲೆ ಅರ್ಥವಾಗುತ್ತಿದೆ. ಆ ರತ್ನಹಾರದಲ್ಲಿ ನಮಗೆ ಪಾಲು ಬೇಡ. ನೀನೇ ಇಟ್ಟುಕೊಂಡರೇನೇ ನಮಗೆ ಸಂತೋಷ. ನಿನ್ನಿಂದ ಹೊಸ ಸೂತ್ರವನ್ನು ನಾವು ಕಲಿತೆವು." ಎಂದು ಅವರಿಬ್ಬರೂ ಮಂದಾಕಿನಿಯನ್ನು ಮನಸಾರೆ ಅಭಿನಂದಿಸಿದರು.





# ದಾನರಹಸ್ಯ

ಒಂದಾನೊಂದು ಊರಿನಲ್ಲಿ ಒಬ್ಬರು ಹರಿದಾಸರಿದ್ದರು. ಅವರು ಊರಿಂದೂರಿಗೆ ಹೋಗಿ ಚೆಂದಾಗಿ ಹರಿಕಥೆ ಹೇಳುತ್ತ, ಶ್ರೋತೃಗಳನ್ನು ಮೆಚ್ಚಿಸುವರು. ಕೂಡಿದವರಲ್ಲಿ ತಮ್ಮ ತಮ್ಮ ಶಕ್ತಿಗೆ ತಕ್ಕ ಹಾಗೆ ಸಂತೋಷದಿಂದ ಕೊಡುವ ಹಣಕಾಸುಗಳಿಂದ ತಮ್ಮ ಜೀವನಯಾತ್ರೆ ಸಾಗಿಸುತ್ತಿದ್ದರು.

ಒಂದುಸಾರಿ ಆ ಹರಿದಾಸರು ಒಂದು ಗ್ರಾಮಕ್ಕೆ ಹೋದರು. ಆ ಊರಿನವರು ಬಹಳ ಸಂತೋಷಪಟ್ಟು ಅವರಿಂದ ಹರಿಕಥೆ ಮಾಡಿಸಬೇಕೆಂದು ನಿಶ್ಚಯಿಸಿದರು. ಅದಕ್ಕೆ ಜಾಗ ಶೇಷಯ್ಯ ಸಾವುಕಾರರ ದೊಡ್ಡ ಮನೆಯ ವಿಸ್ತಾರವಾದ ಅಂಗಳವೇ ಆಗಿತ್ತು. ಆದುದರಿಂದ ಗ್ರಾಮದ ಪ್ರಮುಖರು ಕೆಲವರು ಹರಿದಾಸರನ್ನು ಶೇಷಯ್ಯನ ಮನೆಗೆ ಕರೆದುಕೊಂಡು ಹೋಗಿ, "ಅಯ್ಯಾ, ಇವರಿಂದ ಹರಿಕಥೆ ಮಾಡಿಸಬೇಕೆಂದು ನಾವೆಲ್ಲಾ ನಿರ್ಣಯಿಸಿದ್ದೇವೆ. ಅದು ನಿಮ್ಮ ಮನೆಯಲ್ಲಿ ಆದರೇನೇ ಚೆನ್ನಾಗಿರುತ್ತೆ. ಹರಿದಾಸರಿಗೆ ನಾವೆಲ್ಲಾ ನಮ್ಮ ಶಕ್ತಿಗಳಿಗೆ ಅನುಸರಿಸಿಕೊಟ್ಟು ಗೌರವಿಸೋಣ. ಆಗಬಹುದಷ್ಟೇ ?" ಎಂದು ಕೇಳಿದರು.

ಶೇಷಯ್ಯನು ನಿಜಕ್ಕೂ ಇಂತಹುದರಲ್ಲಿ ಆಸಕ್ತಿಯುಳ್ಳ ರಸಿಕರೇನಲ್ಲ. ಆದರೆ ಊರವರೆಲ್ಲ ತನಗೆ ಗೌರವಬರುವಂತೆ ಈ ಕೆಲಸಮಾಡುವುದರಿಂದ ಅವರಿಗೆ ಸಂತೋಷವೆನಿಸಿ, "ಅಯ್ಯೋ ಅದಕ್ಕೇನಂತೆ? ಒಳ್ಳೆಯ ಕೆಲಸ, ನೀವೆಲ್ಲಾ ನನ್ನ ಮನೆಯನ್ನು ಆರಿಸಿದ ಮೇಲೆ, ಹರಿಕಥೆಗೆ ಏರ್ಪಾಟು ಮಾಡೋಣ" ಎಂದರು. ಅಷ್ಟೇ ಅಲ್ಲದೆ ಹರಿದಾಸರ ವಾಸ ಕೂಡಾ ತನ್ನ ಮನೆಯಲ್ಲೇ ಆಗಲೆಂದು ಒತ್ತಾಯಿಸಿ ಹೇಳಿದರು.

ಸಾವುಕಾರ ಶೇಷಯ್ಯನ ಮನೆಯ ಅಂಗಳಕ್ಕೆ ಚಪ್ಪರ ಹಾಕಿ, ವೇದಿಕೆಯ ನಿರ್ಮಾಣವೂ ಆಯಿತು. ರಾತ್ರಿ ವೇದಿಕೆಯ ಕೇಂದ್ರದಲ್ಲಿ ದೇವರ ಪಟವನ್ನಿಟ್ಟರು. ಕಾಲು ದೀಪ ಬೆಳಗಿಸಿಟ್ಟರು. ಹರಿಕಥೆ ಕೇಳಲು ಬಂದವರೆಲ್ಲಾ ಕೂಡಿ ಚಪ್ಪರ ತುಂಬಿ ಕುಳಿತರು. ವೇದಿಕೆಯ ಮೇಲೆ ದೇವರ ಪಟದ ಮುಂದೆ ದೊಡ್ಡದೊಂದು ಹರಿವಾಣವನ್ನಿಟ್ಟರು. ಹರಿಕಥೆ ಕೇಳಲು ಬಂದವರು ತಮ್ಮ ಶಕ್ತ್ಯಾನುಸಾರವಾಗಿ ಕೊಡಬೇಕೆಂದಿರುವುದನ್ನು ಆ ಹರಿವಾಣಕ್ಕೆ ಹಾಕಬಹುದೆಂಬು ಅರ್ಥ. ಕೆಲವರು

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ

ಮೊದಲೇ ಹಾಕಿ ಕೈ ಮುಗಿದು ಕುಳಿತರೆ, ಮತ್ತೆ ಕೆಲವರು ಕೊನೆಗೆ ಹಾಕೋಣವೆಂತಲೂ ಇದ್ದರು. ಶೇಷಯ್ಯ ಸಾವುಕಾರರೂ ಹರಿದಾಸರಿಗೆ ಕೊಡಲು ಒಂದು ಶಾಲುವೆಯನ್ನೂ, ನೂರು ರೂಪಾಯಿಗಳ ಚೀಲವನ್ನೂ ಚಾವಡಿ ಕೋಣೆಯಲ್ಲಿ ಸಿದ್ಧಪಡಿಸಿಟ್ಟು, ಕಥೆ ಮುಗಿದ ಮೇಲೆ ಕೊಡೋಣವೆಂದಿದ್ದರು.

ಆ ಊರಿನಲ್ಲಿ ವೆಂಕಟ್ರಮಣಯ್ಯ ಎಂಬವನು ಸಣ್ಣ ಸಾವುಕಾರನು. ಅವನು ಬಂದಕೂಡಲೇ ಹರಿದಾಸರ ಹೆಗಲುಗಳಿಗೆ ಮೂರು ರೂಪಾಯಿ ಬೆಲೆಯ ಒಲ್ಲಿಯನ್ನು ಅಲಂಕರಿಸಿ, ಹರಿವಾಣದಲ್ಲಿ ನಾಲ್ಕು ರೂಪಾಯಿಗಳನ್ನು ಹಾಕಿ ಮುಂದಿನ ವರಿಸೆ ಯಲ್ಲಿ ಕುಳಿತನು. ಈ ಹರಿದಾಸರ ಹರಿಕಥೆಯನ್ನು ಅವನ ಮನೆಯಲ್ಲಿ ಜರುಗಿಸಿದ್ದರೆ, ಅವನು ಇದಕ್ಕಿಂತ ಹೆಚ್ಚಿನ ರೀತಿಯಲ್ಲಿ ಗೌರವಿಸುವಷ್ಟು ಆರ್ಥಿಕ ಶಕ್ತಿ ಇದ್ದವನೇ.

ದೊಡ್ಡ ಸಾವುಕಾರರಾದ ಶೇಷಯ್ಯ ಸಮೀಪದಲ್ಲೇ ಕುಳಿತುಕೊಂಡು ಯಾರು ಎಷ್ಟೆಷ್ಟು ಹಾಕುತ್ತಾ ರೆಂಬುದನ್ನು ಗಮನಿಸಿಕೊಂಡೇ ಇದ್ದರು. ಎಲ್ಲರಿಗಿಂತ ಹೆಚ್ಚು ನೀಡಿದವನು ವೆಂಕಟ್ರಮಣಯ್ಯನೇ. ಹತ್ತು ರೂಪಾಯಿಗಳೊಳಗೇ ಅದು ನಿಂತಿತ್ತು. ಹಾಗಿರುವಾಗ ತಾನು ಮಾತ್ರ ಹರಿದಾಸರಿಗೆ ನೂರು ರೂಪಾಯಿ ನಗದನ್ನೂ, ಒಂದು ಜರಿ ಶಾಲುವೆಯನ್ನೂ ಏಕೆ ಕೊಡಬೇಕು ? ಹತ್ತು ರೂಪಾಯಿ ನಗದೂ, ಒಂದು ಜತೆ ಸಾದಾ ಬಟ್ಟೆಯೂ ಕೊಟ್ಟರೆ ಸರಿ ಹೋಗುತ್ತೆ ಅಂದುಕೊಂಡರು.

ಹರಿದಾಸರು ಸಾಮಾನ್ಯದವರೇನಲ್ಲ. ಎಷ್ಟೋ ಸಭೆ ಸಮಾರಂಭಗಳನ್ನು ಕಂಡವರು. ಅವರ ಕಣ್ಣು ಅನೇಕರ ಮುಖಭಾವಗಳನ್ನು ಅಳೆದು ಲೆಕ್ಕ ಹಾಕು ವಂತಹದು. ಅವರು ಹರಿಕಥೆಯನ್ನು ಹೇಳುತ್ತಾ ಇರುವಾಗ ಶೇಷಯ್ಯ ಎದ್ದು ಏನೋ ಕೆಲಸವಿದ್ದವ ರಂತೆ ಚಾವಡಿ ಕೋಣೆಗೆ ಹೋದುದನ್ನು ನೋಡಿ ದರು. ಅಲ್ಲಿ ಈ ಮೊದಲೇ ಸಿದ್ಧಪಡಿಸಿಟ್ಟಿದ್ದ ಶಾಲನ್ನೂ, ರೂಪಾಯಿಗಳ ಚೀಲವನ್ನೂ ಎತ್ತಿ ಕವಾಟಿನೊಳಗಿಟ್ಟು, ಅವುಗಳಿಗೆ ಬದಲು ಬೇರೆ



ಪಂಚೆಗಳನ್ನೂ, ಹತ್ತು ರೂಪಾಯಿಗಳನ್ನೂ ಮಣೆಯ ಮೇಲಿಟ್ಟು ಬಂದು ಕುಳಿತುಕೊಂಡರು ಶೇಷಯ್ಯ.

ಮೊದಲಿನಿಂದಲೂ ಶೇಷಯ್ಯನನ್ನು ಗಮನಿಸಿ ಕೊಂಡಿದ್ದ ಹರಿದಾಸರು, ಅವರ ಮನಸ್ಸಿನಲ್ಲಿ ಏಳುವ ಆಲೋಚನೆಗಳನ್ನೂ ಮುಖದಿಂದ ಅಳೆಯುತ್ತ, ಅವರು ಏನು ಮಾಡಿದರೆಂಬದನ್ನು ಕಂಡುಕೊಂಡರು. ಶೇಷಯ್ಯ ತಿರುಗಿಬಂದು ಕುಳಿತುಕೊಂಡ ಮೇಲೆ, ಈ ವಿಧವಾಗಿ ಒಂದು ಉಪಕಥೆಯನ್ನು ಉದಾಹರಣೆಯಾಗಿ ತಮ್ಮ ಪದ್ಧತಿಯಲ್ಲಿ ಹೇಳತೊಡಗಿದರು ಹರಿದಾಸರು. ಕರ್ಣನು ಮಹಾದಾತನು. ಕೇಳಿದವರಿಗೆ ಇಲ್ಲವೆಂಬುದನ್ನು ಅರಿಯದವನು. ಒಂದು ದಿನ ಕರ್ಣನು ಅಭ್ಯಂಜನಕ್ಕೆ ಸಿದ್ಧನಾಗುತ್ತಿರುವಾಗ, ಬ್ರಾಹ್ಮಣನೊಬ್ಬನು ಯಾಚನೆಗೆ ಬಂದಿರುವನೆಂದು ಸೇವಕನು ಹೇಳಿದನು. ಆ ಬ್ರಾಹ್ಮಣನನ್ನು ತನ್ನ ಬಳಿಗೆ ಕರೆದು ತರುವಂತೆ ಆಜ್ಞೆ ಮಾಡಿದನು ಕರ್ಣ.

ಯಾಚಕ ಬ್ರಾಹ್ಮಣನು ಬರುವಾಗ ಕರ್ಣನು ಎಡದ ಕೈಯಲ್ಲಿ ಬಂಗಾರದ ಪಾತ್ರದಲ್ಲಿ ಎಣ್ಣೆಯನ್ನು ಇಟ್ಟುಕೊಂಡು ಬಲಗೈಯಿಂದ ಎಣ್ಣೆಯನ್ನು ದೇಹಕ್ಕೆ ಹಚ್ಚಿಕೊಳ್ಳುತ್ತಿದ್ದನು.

"ಮಹಾರಾಜಾ, ಬಡ ಬ್ರಾಹ್ಮಣ, ತಮಗೆ ತೋರಿದುದನ್ನು ದಾನಮಾಡಿರಿ, ಸಾಕು" ಎಂದನು ಬ್ರಾಹ್ಮಣ. ತಕ್ಷಣವೇ ಮಹಾದಾತನಾದ ಕರ್ಣನು ಎಡಗೈಯಲ್ಲಿದ್ದ ಬಂಗಾರದ ಪಾತ್ರವನ್ನು ಹಾಗೆಯೇ ಆ ಬ್ರಾಹ್ಮಣನಿಗೆ ಕೊಟ್ಟುಬಿಟ್ಟನು.

ಬ್ರಾಹ್ಮಣನು ಅದನ್ನು ಸಂತೋಷದಿಂದ ಸ್ವೀಕರಿಸಿ "ಅಯ್ಯಾ, ಮಹಾದಾತನೇ, ಎಡದಕೈಯಿಂದ ಏಕೆ ದಾನ ಕೊಟ್ಟೆಯೋ ತಿಳಿಯಲಿಲ್ಲ. ಎಲ್ಲರೂ ಬಲಗೈಯಿಂದಲೇ ದಾನಮಾಡುತ್ತಾರೆ." ಎಂದನು.

ಅದಕ್ಕೆ ಕರ್ಣನು ಮುಗುಳು ನಗುತ್ತ, "ಇದು ದಾನ ಕೊಡುವ ವಿಷಯದಲ್ಲಿ ಎಲ್ಲರೂ ನೆನಪಿಡಬೇಕಾದ ಗುಟ್ಟು. ಮಾಡಬೇಕೆನಿಸಿದ ದಾನವನ್ನು ಆ ಕ್ಷಣದಲ್ಲೇ ಮಾಡಿಬಿಡಬೇಕು. ನಿನಗೆ ಈ ಪಾತ್ರವನ್ನು ಕೊಡಬೇಕೆಂದು ನನಗೆ ತೋರಿದ ಕ್ಷಣದಲ್ಲಿ, ಅದು ನನ್ನ ಎಡಗೈಯಲ್ಲಿತ್ತು. ಅದನ್ನು ಬಲಗೈಗೆ ಬದಲಾಯಿಸುವುದರೊಳಗೆ ನನ್ನ ಬುದ್ಧಿ ಬದಲಾಗಿಬಿಡಬಹುದು. ಆದ್ದರಿಂದಲೇ ಎಡಗೈಯಲ್ಲಿದ್ದ ವಸ್ತುವನ್ನು ಆ ಕೈಯಿಂದಲೇ ಕೊಟ್ಟೆನು" ಎಂದನು.

ಈ ಪುಟ್ಟ ಉಪಕಥೆ ಮುಗಿಸಿ ಹರಿದಾಸರು ಮುಖ್ಯ ಕಥೆಗೆ ಬಂದರು. ಶೇಷಯ್ಯ ಸಾವುಕಾರರಿಗೆ ಆ ಕಥೆ ಗಲ್ಲಕ್ಕೆ ಬಿದ್ದ ತಪರಾಕಿಯಂತೆ ಆಗಿತ್ತು. ಹರಿಕಥೆ ಪೂರ್ತಿಯಾದ ಮೇಲೆ ಅವರು ಹರಿದಾಸರಿಗೆ ಮೊದಲು ಕೊಡಬೇಕೆಂದು ಕೊಂಡಿದ್ದ ಕಾಣಿಕೆಗಳಿಗಿಂತಲೂ ಹೆಚ್ಚು ಬೆಲೆಬಾಳುವಂತಹವುಗಳನ್ನೇ ಕೊಟ್ಟು ಗೌರವಿಸಿ ಕಳುಹಿಸಿದರು.





# ಹೆಂಡತಿ ಕಲಿಸಿದ್ದು

**ಚಂ**ದನಪುರದಲ್ಲಿ ಭಾಸ್ಕರನೆಂಬ ಯುವಕನೊಬ್ಬನಿದ್ದನು. ಅವನಿಗೆ ಪಕ್ಕದ ಗ್ರಾಮದ ಶ್ರೀಮಂತರ ಮನೆಯ ಹುಡುಗಿಯಾದ ಅಂಬಿಕೆಯೊಂದಿಗೆ ಮದುವೆಯಾಯಿತು. ಗಂಡಹೆಂಡಿರು ಒಳ್ಳೆಯ ರೀತಿಯಲ್ಲಿ ಸಂಸಾರ ನಡೆಸಿಕೊಂಡಿದ್ದರು.

ಒಂದು ಸಾರಿ ಮುಕುಂದನೆಂಬ ಭಾಸ್ಕರನ ಮಿತ್ರನು ತನ್ನ ಹೆಂಡತಿಯೊಂದಿಗೆ ನಗರದಿಂದ ಅವನನ್ನು ನೋಡಲು ಬಂದನು.

ಮುಕುಂದನ ಹೆಂಡತಿ ಗೌರಿ ಬಹಳ ಚೆನ್ನಾಗಿ ಹಾಡಲು ಕಲಿತಿದ್ದಳು. ಅವಳ ಹಾಡನ್ನು ಕೇಳಿ ಭಾಸ್ಕರನೂ ಅಂಬಿಕೆಯೂ ಬಹಳ ಸಂತೋಷಪಟ್ಟರು. ಮುಕುಂದನಿದ್ದ ಒಂದು ವಾರ ದಿನಗಳು ಬಲುಬೇಗನೆ ಕಳೆದಂತೆ ತೋರಿತು.

ಒಂದು ವಾರದ ಮೇಲೆ ಮುಕುಂದನು ಹೆಂಡತಿಯೊಂದಿಗೆ ಹೊರಟು ಹೋದನು, ಭಾಸ್ಕರನು ತನ್ನ ಹೆಂಡತಿಯೊಂದಿಗೆ, "ಕೇಳಿದೆಯಾ ಗೌರಿಯ ಹಾಡು? ಅಲ್ಲ, ಅಂಬಿಕಾ, ನೀನು ಕೂಡಾ ಗೌರಿಯ ಹಾಗೆ ಹಾಡಲು ಅಭ್ಯಾಸಮಾಡಬಾರದೆ?" ಎಂದನು. ಗಂಡನ ಈ ಪ್ರಶ್ನೆ ಕೇಳಿ ಅಂಬಿಕೆಗೆ ಬಹಳ ಆಶ್ಚರ್ಯವಾಯಿತು. ಸಂಗೀತ, ಚಿತ್ರಕಲೆ, ಕವಿತ್ವಗಳಂತಹ ಲಲಿತಕಲೆಗಳು, ಹಾಗೆಲ್ಲಾ ಯಾವಾಗೆಂದರಾವಾಗ ಕಲಿತು ಬಿಟ್ಟರೆ ಬಂದು ಬಿಡುತ್ತವೇನು? ಗೌರಿ ತನ್ನ ಆರನೆಯ ವಯಸ್ಸಿನಲ್ಲಿಯೇ ಗುರುವಿನ ಹತ್ತಿರ ಸಂಗೀತ ಸಾಧನೆ ಮಾಡಿದವಳಂತೆ. ಅಂತಹ ನಿರಂತರ ಅಭ್ಯಾಸದಿಂದಲೇ ಅವಳು ಅಷ್ಟು ಚೆನ್ನಾಗಿ ಹಾಡಲು ಸಾಧ್ಯವಾಗಿತ್ತು.

ಇದನ್ನೆಲ್ಲ ಯೋಚಿಸಿ ಅಂಬಿಕೆ ಗಂಡನೊಂದಿಗೆ, "ನನ್ನ ಕಂಠಸ್ವರ ಏನೂ ಚೆನ್ನಾಗಿಲ್ಲ. ನಾನು ಹೇಗೆ ಹಾಡಲಾದೀತು?" ಎಂದಳು.

ಆದರೆ ಇದರಿಂದ ಭಾಸ್ಕರನು ಸುಮ್ಮನಾಗಲಿಲ್ಲ. ಅವನು ಮುಖ ಸುರುಟಿಸಿ, "ಕಂಠಸ್ವರ ಚೆನ್ನಾಗಿಯೇ ಇದೆ. ದಿನಾ ಸ್ವಲ್ಪ ಸ್ವಲ್ಪ ಹಾಡುತ್ತಾ ಇದ್ದರೆ ತನ್ನಂತೆ ಬಂದು ಬಿಡುತ್ತದೆಂದು ಹಿರಿಯರು ಹೇಳುತ್ತಾರೆ ಗೊತ್ತಾ? ಮುಖ್ಯ ಮನಸ್ಸು ಬೇಕು. ಪ್ರಯತ್ನಿಸಿ ನೋಡು" ಎಂದನು.

ಮುಂದೆ ಕೆಲವುದಿನಗಳ ಮೇಲೆ ಓಂಕಾರ ಶರ್ಮನೆಂಬವನು ಆ ಗ್ರಾಮಕ್ಕೆ ಬಂದು ತಾನು ಬರೆದ ಚಿತ್ರಗಳನ್ನು ಪ್ರದರ್ಶನಕ್ಕಿಟ್ಟನು. ಅವನು ಮಾಡಿದ

ಆರ್. ಎಸ್. ನಾರಾಯಣಮೂರ್ತಿ

ಚಿತ್ರಗಳೆಲ್ಲವೂ ಗ್ರಾಮವಾತಾವರಣಕ್ಕೆ ಸಂಬಂಧಿಸಿದ ಚಿತ್ರಗಳು. ಎಲ್ಲವೂ ಸುಂದರವಾಗಿ ಕಂಗೊಳಿಸುತ್ತ, ಅವನು ಚೆನ್ನಾಗಿ ನುರಿತ ಒಳ್ಳೆಯ ಚಿತ್ರಕಾರನೆಂಬುದನ್ನು ಸಾರುತ್ತಿದ್ದುವು.

ಆ ಪ್ರದರ್ಶನವನ್ನು ನೋಡಿ ಅಂಬಿಕೆ ಮುಗ್ಧಳಾಗಿ ಮನೆಗೆ ಬಂದ ಮೇಲೆ ಗಂಡನೊಂದಿಗೆ, "ಅಲ್ಲಾ ಅಂದ್ರೆ, ಓಂಕಾರಶರ್ಮನ ಆ ಚಿತ್ರಗಳನ್ನು ನೋಡಿದಿರಷ್ಟೆ ? ಜೀವಕಳೆ ಬರುವ ಹಾಗೆ ಎಷ್ಟು ಚೆನ್ನಾಗಿವೆ! ನೀವು ಕೂಡಾ ಅಂತಹ ಚಿತ್ರಗಳನ್ನು ಮನಸ್ಸು ಮಾಡಿದರೆ ಬಿಡಿಸಬಹುದು. ಒಂದು ಚಿತ್ರ ಮಾಡಿರಿ, ನೋಡುತ್ತೇನೆ" ಎಂದಳು.

ಅವಳ ಮಾತು ಕೇಳಿ ಭಾಸ್ಕರನು ಆಶ್ಚರ್ಯಪಡುತ್ತ, "ನಾನು ಚಿತ್ರ ಬರೆಯುವುದೇ ? ಚಿತ್ರಕಲೆ ಎಂದರೆ ಬಾಳೇ ಹಣ್ಣು ಸುಲಿದಹಾಗೆಂದು ಕೊಂಡೆಯಾ ?" ಎಂದನು.

"ಸುಲಭ ಅಂತ ನಾನೇನೂ ಹೇಳಲಿಲ್ಲ. ಪ್ರಯತ್ನಿಸಿ ನೋಡಿರಿ ಅನ್ನುತ್ತೇನೆ. ಹಟಹಿಡಿದು ಗೆರೆಹಾಕುತ್ತಾ ಹೋದರೆ ಚಿತ್ರಗಳು ಆಗುತ್ತವೆ. ಅಭ್ಯಾಸ ಮಾಡಿದರೆ ಬಾರದ್ದು ಯಾವುದೂ ಇಲ್ಲ ಅಂತ ಹಿರಿಯರು ಹೇಳುತ್ತಾರೆ" ಎಂದಳು ಅಂಬಿಕೆ.

ಅದನ್ನು ಕೇಳಿ ಭಾಸ್ಕರನಿಗೆ ಹಾಡಿನ ವಿಷಯದಲ್ಲಿ ತಾನು ಹೆಂಡತಿಗೆ ಹೇಳಿದ ಮಾತು ನೆನಪಾಯಿತು. ಅವನು ಅವಳೊಂದಿಗೆ, "ಆ ದಿನ ನನ್ನ ಗೆಳೆಯನ ಹೆಂಡತಿ ಗೌರಿಯ ಹಾಡು ಕೇಳಿದ ಆನಂದದಲ್ಲಿ ನಿನಗೆ ಅರ್ಥವಿಲ್ಲದ ಆಲೋಚನೆ ಹೇಳಿದೆ, ಅದು ದೊಡ್ಡ ತಪ್ಪು, ಲಲಿತಕಲೆಗಳಲ್ಲಿ ಪ್ರಾವೀಣ್ಯತೆ ಸಂಪಾದಿಸುವ ಕೆಲಸ ಎಲ್ಲರಿಂದ ಸಾಧ್ಯವಾಗದು. ಒಂದು ವೇಳೆ ಅಂತಹುದನ್ನು ಸಾಧಿಸಲು ಎಳಸಿದರೆ ಚಿಕ್ಕಂದಿನಿಂದ ತಕ್ಕ ಗುರುವಿನ ಹತ್ತಿರ ಶಿಕ್ಷಣ ಪಡೆಯಬೇಕು. ಆದರೂ ತಾನು ಕಲಿಯಲೆಳಸಿದ ಕಲೆಗಳ ಮೇಲೆ ಸ್ವಭಾವಸಿದ್ಧವಾದ ಆಸಕ್ತಿಯೂ, ಕೌಶಲ್ಯವೂ ಇಲ್ಲದೆ ಹೋದರೆ ಅದು ಚೆನ್ನಾಗಿ ಬೆಳಗಲಾರದು" ಎಂದನು.

"ಹಾಗೆ ಹೇಳಿರಿ ಮತ್ತೆ. ನಾವು ಚಿಕ್ಕಂದಿನಲ್ಲಿ ಅಂತಹುದಕ್ಕೆ ಹೋಗಲೇ ಇಲ್ಲ. ಅಂದ ಮೇಲೆ ಈಗ ಏನು ತಾನೇ ಮಾಡಲು ಸಾಧ್ಯ? ನನಗೆ ಸಂಗೀತ ಹೇಗೆ ಬಂದೀತು ?" ಎಂದಳು ಅಂಬಿಕೆ.

"ಆ ಯೋಚನೆ ಬಿಡು. ನಮ್ಮಂಥವರು ಏನು ಮಾಡಬೇಕೆಂದರೆ, ಆಯಾ ಕಲೆಗಳಲ್ಲಿ ಪ್ರತಿಭಾವಂತರಾದವರನ್ನು ಗೌರವಿಸಿಕೊಂಡಿರಬೇಕು. ಆದರಿಸಿಕೊಂಡಿರಬೇಕು. ಮೆಚ್ಚಬೇಕು, ಸಂತೋಷಪಡಬೇಕು." ಎಂದನು ಭಾಸ್ಕರ.

ಗಂಡನು ಲಲಿತ ಕಲೆಗಳನ್ನು ಕುರಿತು ವಾಸ್ತವವನ್ನು ಅರಿತುಕೊಂಡುದನ್ನು ತಿಳಿದು ಅಂಬಿಕೆಗೆ ಸಂತೋಷವಾಯಿತು.





ವಿಭೀಷಣನು ರಾವಣನಿಗೆ ಹೇಳಿದ ಹಾಗೆಯೇ ರಾವಣನ ಪಟ್ಟಮಹಿಷಿಯಾದ ಮಂಡೋದರಿ ಕೂಡಾ ಗಂಡನಿಗೆ ಹಿತವಾದುದನ್ನು ಹೇಳತೊಡಗಿದಳು. "ನಾಥಾ, ಮೂಗು ಕಿವಿಗಳನ್ನು ಘಾಸಿ ಮಾಡಿದರೆಂತಲೋ, ತನ್ನನ್ನು ವರಿಸಿಕೊಳ್ಳಲು ಅವರು ಒಪ್ಪಲಿಲ್ಲವೆಂತಲೋ ನಿನ್ನ ತಂಗಿ ಅವಮಾನ ತಾಳಲಾಗದೆ ಹೋದಾಗ, ಹಾಗೆಯೇ ಏಕಾಂಗಿನಿಯಾಗಿ, ಅಸಹಾಯಳಾಗಿದ್ದ ಸೀತೆಯನ್ನು ನೀನು ಬಂಗಾರವನ್ನೋ, ಪಶುವನ್ನೋ, ಪಕ್ಷಿಯನ್ನೋ ಎತ್ತಿಕೊಂಡು ಬಂದ ಹಾಗೆ ಮಾಡಿದ ಕೆಲಸಕ್ಕೆ ಸೀತೆ ಎಷ್ಟು ಸಂಕಟಪಡುವಳೆಂದು ಯೋಚಿಸಿದೆಯಾ ? ಶೂರ್ಪಣಖಿ ಪ್ರತೀಕಾರ ಮಾಡಲು ಸೀತೆಯನ್ನು ಎತ್ತಿಕೊಂಡು ಬರಲು ಹೇಳಿದಂತೆ, ಸೀತೆಗೂ ತನಗೆ ನಡೆದ ಅವಮಾನಕ್ಕೆ ಇನ್ನೆಷ್ಟು ದೊಡ್ಡ ಪ್ರತೀಕಾರವಾಗಬೇಕೆಂದು ನೋಡುವಳೋ ! ಇದನ್ನು ನೀನು ಆಲೋಚಿಸಬೇಕು ನಾಥಾ! ಅವಳ ಹಾಗೆಯೇ ಇವಳೂ ಸ್ತ್ರೀ ಯಲ್ಲವೇ ? " ಎಂದಳು.

ಆ ಮಾತಿಗೆ ರಾವಣನು, "ಹೌದು ಮಂಡೋದರೀ. ಅದೆಲ್ಲಾ ನಿಜವೇ ; ಅಲ್ಲವೆನ್ನಲಾರೆ. ಆದರೆ ಏನು ಬೇಕಾದರೂ ಆಗಲಿ. ರಾವಣನು ತಲೆ ಬಾಗಿದನೆಂದು ಆಗಲು ಸಾಧ್ಯವೇ ಇಲ್ಲ. ನಿನ್ನ ಗಂಡ ಭೀರುವಲ್ಲ. ನನ್ನಂಥವನ ಹೆಂಡತಿಯಾದ ನೀನು ನನಗೆ ಪುಕ್ಕಲು ಮದ್ದು ಅರೆದು ಹಚ್ಚಬೇಡ. ಆ ರಾಮನು ಏನು ಮಾಡುವನೆಂದು ನಾನೂ ನೋಡುತ್ತೇನೆ" ಎಂದನು.

ಇಲ್ಲಿ ಹೀಗಿರುವಾಗ ಅಲ್ಲಿ ರಾಮನ ಹತ್ತಿರ ಎಲ್ಲೆಲ್ಲಿದ್ದ ವಾನರರೆಲ್ಲಾ ಬಂದು ಸೇರುತ್ತಿದ್ದ ಹಾಗೆ, ಬ್ರಹ್ಮಾಂಡದಂತಹ ವಾನರ ಸೇನೆ ತಯಾರಾಯಿತು. ಸುಗ್ರೀವ, ನೀಲ, ಅಂಗದ, ಸುಷೇಣ, ಜಾಂಬವಂತ ಮೊದಲಾದ ಪ್ರಮುಖರೆಲ್ಲಾ ಸೇನೆಗೆ ನಾಯಕರಾಗಿ ರಾಮನ ಸುತ್ತಲೂ ನಿಂತರು. ಹನುಮಂತನು ರಾಮನ ಮುಖ್ಯ ಕಾರ್ಯದರ್ಶಿಯಾದನು. ರಾಮಲಕ್ಷ್ಮಣರ ಅಂಗರಕ್ಷಕನೂ ಹನುಮಂತನೇ. ಹೀಗೆ ಲಂಕೆಯ ಮೇಲೆ ದಾಳಿ ಪ್ರಾರಂಭವಾಯಿತು.



ಹನುಮಂತನೇ ಮೊದಲಾದ ವಾನರರು ಗುಡ್ಡಗಳನ್ನೂ, ಹೆಬ್ಬಂಡೆಗಳನ್ನೂ ಎತ್ತಿತ್ತಿ ತಂದು ಸಮುದ್ರಕ್ಕೆ ಹಾಕಿದರು. ಬಂಡೆಗಳೂ, ಕಲ್ಲುಗಳೂ, ಮರಗಳೂ ಸಹಸ್ರಾರು ಕೋತಿಗಳ ತಲೆಯ ಮೇಲಿಂದ ಬಂದು ಬಂದು ಮೇಲಿಂದ ಮೇಲೆ ಸಮುದ್ರದಲ್ಲಿ ಬಿದ್ದುವು.

ಲಂಕೆಗೆ ಸಮುದ್ರದ ಮೇಲೆ ನೂರು ಯೋಜನ ಉದ್ದವಾದ ಸೇತುವೆ ನಿರ್ಮಾಣವಾಯಿತು. ನೀಲನು ನಿರ್ಮಾಣದ ಪರೀಕ್ಷೆಯನ್ನು ಮಾಡಿ ಸೇತುವೆ ಸಮುದ್ರದಲ್ಲಿ ತೇಲಿಕೊಂಡಿರುವ ಹಾಗೆ ನೋಡಿಕೊಂಡನು. ಏನನ್ನು ನೀರಿಗೆ ಹಾಕಿದರೂ ತೇಲುತ್ತಿರುವಂತೆ ಅವನಿಗೆ ಸಿಕ್ಕಿದ್ದ ಒಂದು ವರವು ಇದಕ್ಕೆ ಉಪಯೋಗವಾಯಿತು.

ಈ ಸಮಯದಲ್ಲೇ ರಾವಣನಿಂದ ಹೊರಗೆ ಅಟ್ಟಲ್ಪಟ್ಟ ವಿಭೀಷಣನು ಆಕಾಶ ಮಾರ್ಗದಲ್ಲಿ ಬಂದು ರಾಮನಲ್ಲಿ ಶರಣಾಗತನಾದನು. ರಾಮನು ಅವನಿಗೆ ಅಭಯವಿತ್ತು, ಲಂಕೆಗೆ ಅವನನ್ನೇ ರಾಜನನ್ನಾಗಿ ಮಾಡುವೆನೆಂದು ಮಾತುಕೊಟ್ಟು, ಅದರಲ್ಲಿ ರವಷ್ಟೂ ಸಂದೇಹವಿಲ್ಲದ ಹಾಗೆ ಆಗಿಂದಾಗಲೇ ಸಮುದ್ರ ಜಲದಿಂದ ಅವನಿಗೆ ಲಂಕಾ ರಾಜ್ಯದ ಪಟ್ಟಾಭಿಷೇಕವನ್ನೂ ಮಾಡಿದನು.

ರಾಮನು ಎರಡು ಕೈಗಳಲ್ಲಿಯೂ ಕೋದಂಡ ಮತ್ತು ರಾಮಬಾಣಗಳನ್ನು ಧರಿಸಿ ಸೇತುವೆಯ ಮೇಲಿಂದಾಗಿ, ವಾನರ ಸೇನೆಯೊಂದಿಗೆ ಲಂಕೆಗೆ ಹೊರಟನು. ಅವರ ಜತೆಯಲ್ಲಿ ಭಾವೀ ಲಂಕಾ ರಾಜ ವಿಭೀಷಣನೂ ಇದ್ದನು.

ರಾವಣನ ಗೂಢಚಾರರು ರಾಮನು ವಾನರ ಸೇನೆಯನ್ನು ಸಾಗಿಸಿಕೊಂಡು ಸಮುದ್ರವನ್ನು ದಾಟಿ ಬರುತ್ತಾ ಇದ್ದಾನೆಂದು ರಾವಣನೊಂದಿಗೆ ಹೇಳಿದರು. ಆ ವಾರ್ತೆಯನ್ನು ಕೇಳಿ ನಂಬಲಾಗದೆ ರಾವಣನು ಚಕಿತನಾದನು. ನರಮನುಷ್ಯನೊಬ್ಬನು ವಾನರರ ಗುಂಪನ್ನು ಕಟ್ಟಿಕೊಂಡು, ಸಮುದ್ರದ ಮೇಲೆ ನೂರು ಯೋಜನ ಉದ್ದದ ಸೇತುವೆ ಕಟ್ಟಿ ಬಂದು, ಮೂರು ಲೋಕಗಳನ್ನೂ ನಡುಗಿಸುವ ರಾವಣನಂಥವನನ್ನು ಹೊಡೆದು ತನ್ನ ಸೊತ್ತಾದ ಹೆಂಡತಿಯನ್ನು ತಂದುಕೊಂಡನೆಂದು ಹೇಳುವ ಹಾಗಾಗುವುದುಂಟೆ! ಏನಾಶ್ಚರ್ಯವಿದು! ನಿಜಕ್ಕೂ ಹೀಗೊಂದು ಕಾರ್ಯ ನಡೆದೀತೆ? ಗೂಢಚಾರರು ಏನನ್ನು ನೋಡಿ ಭ್ರಮಿಸಿ ಗಳಹುವರೋ?

ಹೀಗೆ ರಾವಣನು ಅನುಮಾನ ಪಡುತ್ತಿರುವಾಗ, ಮಂತ್ರಿ ಪ್ರಹಸ್ತನು ಆ ವಾರ್ತೆ ತಿಳಿದು ರಾವಣನ ಬಳಿಗೆ ಬಂದು, "ನಾವು ಇಲ್ಲಿಗೆ ಬರುವ ಶತ್ರುವನ್ನು ದಾರಿಯಲ್ಲಿಯೇ ಇದಿರಿಸಿ ಸಮುದ್ರದೊಳಗೆ ಮುಳುಗಿಸಿಬಿಡುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ" ಎಂದನು.

ರಾವಣನು ನಕ್ಕು, "ಏಕೆ ಆತುರ ಪಡುವಿರಿ? ನಮ್ಮ ಕುಂಭಕರ್ಣನಿಗೆ ಸಾಕಾಗುವಷ್ಟು ಆಹಾರ



ಸಿಗುವುದಿಲ್ಲ. ಅವರೆಲ್ಲ ಲಂಕೆಗೆ ಬರಲಿ. ಜೇಡನ ಬಲೆಯೊಳಗೆ ಸಿಕ್ಕಿಕೊಂಡ ನೊಣಗಳ ಹಾಗೆ ಅವರೆಲ್ಲ ನನ್ನ ತಮ್ಮನ ಹಸಿವಿಗೆ ಉಪಯೋಗವಾಗುತ್ತಾರೆ. ಕುಂಭಕರ್ಣನಂತಹ ದೊಡ್ಡ ಜಗೋದರನೇ ನಮ್ಮಲ್ಲಿರುವಾಗ ಹೆದರುವಿರೇಕೆ ? " ಎಂದನು.

ರಾಮನು ಮಹಾ ವಾನರ ಸೇನೆಯೊಂದಿಗೆ ನಿರಾತಂಕವಾಗಿ ವಾರಿಧಿಯನ್ನು ದಾಟಿ ಲಂಕಾ ತೀರವನ್ನು ಸೇರಿ ಅಲ್ಲೆಲ್ಲಾ ಹರಡಿಕೊಂಡನು.

ಲಂಕಾನಗರವು ಎತ್ತರವಾದ ಪರ್ವತದ ತಲೆಯಲ್ಲಿ ನಿರ್ಮಿಸಲ್ಪಟ್ಟಿತ್ತು. ಪರ್ವತಾಗ್ರದ ಸೌಧದ ಮೇಲೆ ರಾವಣನು ನಿಂತು ನೋಡುತ್ತಿದ್ದನು. ರಾಮನ ದಂಡು ವಿಸ್ತಾರವಾದ ಸ್ಥಳವನ್ನಾಕ್ರಮಿಸಿ ಇರುವೆಗಳ ಸಾಲಿನ ಹಾಗೆ ಕಂಡುವು. ಅವುಗಳ ವ್ಯೂಹ ರಚನೆಯ ಚಲನವಲನಗಳನ್ನು ರಾವಣನು ಪರೀಕ್ಷಿಸಿಕೊಂಡಿದ್ದನು.

ಹಾಗೆ ದೂರದಲ್ಲಿರುವ ರಾವಣನನ್ನು ನೋಡಿದ ಕೂಡಲೇ ಅಂಗದನಿಗೆ ಪೌರುಷ ಬಂದಿತು. ಅವನು ಹುಡುಗಾಟದ ಆತುರದಿಂದ, ತಾನು ಹೋಗಿ ಆ ರಾವಣನನ್ನು ತುಸು ಮಾತಾಡಿಸಿ ಬರುತ್ತೇನೆಂದು ಹೇಳಿ, ರಿವ್ವನೆ ಆಕಾಶ ಮಾರ್ಗಕ್ಕೆ ಹಾರಿ ರಾವಣಾಸುರನ ಸೌಧದ ಮೇಲೆ ಎರಗಿದನು.

" ಎಲೋ ರಾವಣಾ ! ಒಂದು ಕಾಲದಲ್ಲಿ ನಿನ್ನನ್ನು ಬಾಲದಲ್ಲಿ ಸುತ್ತಿ ಬಿಸುಟ ವಾಲಿಯ ಕುಮಾರನಾದ ಅಂಗದನು ನಾನು. ಆಗಿನಿಂದ ನೀನು ನನ್ನ ತಂದೆಯ ಮೇಲೆ ಗೌರವ ಮರ್ಯಾದೆಗಳನ್ನಿಟ್ಟು ಮಿತ್ರನಾಗಿರುವಿ. ಆದುದರಿಂದಲೇ ಹೇಳುತ್ತೇನೆ. ಈಗಾದರೂ ಸಮಯ ಮಿಂಚಿ ಹೋಗಲಿಲ್ಲ. ರಾಮನೊಂದಿಗೆ ವೈರವನ್ನು ಬಿಡು. ಶರಣು ಬೇಡಿಕೋ. ವಾನರಗಳ ಗುಂಪಿನೊಂದಿಗೆ ಅವನೇನು ಮಾಡಿಯಾನೆಂಬ ಅಲಕ್ಷ್ಯತೆಯಿಂದಿರಬೇಡ. ವಾನರರು ಎಂಥವರೆಂದು ನಿನಗೇನೂ ಹೇಳಬೇಕಾಗಿಲ್ಲ ! ಅಷ್ಟು ಮಾಡಿ ದೊಡ್ಡ ಸಮುದ್ರವನ್ನು ಸುಲಭವಾಗಿ ದಾಟಿ ಬಂದುದನ್ನು ನೋಡಿಯಾದರೂ ತಿಳಿದುಕೋ " ಎಂದನು.

ಆ ಮಾತು ಕೇಳಿ ರಾವಣನಿಗೆ ಕೋಪ ಬಂದು ಅಂಗದನ ಮೇಲೆ ಕತ್ತಿಯನ್ನೆತ್ತಿದನು. ಅಂಗದನು, " ನಿನ್ನ ಬುದ್ಧಿ ಅಷ್ಟೇ " ಎಂದು ರಾವಣನ ಕಿರೀಟವನ್ನು ಒದ್ದು ಕೆಡವಿ, ತಿರುಗಿ ಹಾರಿ ವಾನರ ಸೈನ್ಯವಿರುವಲ್ಲಿಗೆ ಬಂದು ಸೇರಿದನು.

ವಾನರ ಸೈನ್ಯವು ವಿಜೃಂಭಿಸಿ ಲಂಕಾ ನಗರವನ್ನು ಮುತ್ತಿಗೆ ಹಾಕಿ ರಾಕ್ಷಸ ಸೇನೆಗಳನ್ನು ಸಂಹರಿಸ ತೊಡಗಲು, ರಾವಣನು ಕುಂಭಕರ್ಣನನ್ನು ನಿದ್ದೆಯಿಂದ ಎಬ್ಬಿಸಿದನು. ಅರ್ಧ ನಿದ್ದೆಯಿಂದ ಎಬ್ಬಿಸಿದ ಕೋಪದಲ್ಲಿರುವ ಕುಂಭಕರ್ಣನಿಗೆ ಬೇಕಾದಷ್ಟು ಆಹಾರ ಪಾನೀಯಗಳಿಂದ ಹಸಿವೆ ತಣಿಸಿ, ಯುದ್ಧಕ್ಕೆ ಹೋಗುವಂತೆ ಆಜ್ಞೆ ಮಾಡಿದನು ರಾವಣ.

ಹಿಂದೆ ಕುಂಭಕರ್ಣನು, ತನಗೆ ಆರು ತಿಂಗಳು ತಿನಿಯೂ, ಒಂದು ದಿನ ನಿದ್ದೆಯೂ ಬೇಕೆಂದು ವರ



ಕೇಳಲು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದನು. ಅವನ ಉದ್ದೇಶವನ್ನು ತಿಳಿದು ಎಲ್ಲರೂ ಹೆದರಿದರು. ಸರಸ್ವತಿಯಿಂದಾಗಿ ಅವನು ಕೇಳಿದ ವರವು ತಾರುಮಾರಾಗಿ, ಆರು ತಿಂಗಳ ನಿದ್ದೆಯೂ, ಒಂದು ದಿನ ತಿಂಡಿಯೂ ಬೇಕೆಂದು ಕೇಳಿದ್ದನು. ಬ್ರಹ್ಮನೂ ಹಾಗೆಯೇ ವರ ಕೊಟ್ಟಿದ್ದನು.

ಆರು ತಿಂಗಳ ಮೊದಲೇ ನಿದ್ರೆಯಿಂದ ಎದ್ದುಬಿಟ್ಟರೆ ಕುಂಭಕರ್ಣನ ಶಕ್ತಿ ತಗ್ಗಿ ಹೋಗುತ್ತದೆ. ಈಗಂತೂ ಯುದ್ಧಕ್ಕೆ ಕಾರಣವಾದ ರಾವಣನು ಮಾಡಿದ ಕೆಲಸವನ್ನು ತಿಳಿದು ಕುಂಭಕರ್ಣನು ರಾವಣನ ಮೇಲೆ ಕಿನಿಸುಗೊಂಡು ಹಿತಬೋಧೆ ಮಾಡಿದನು.

ರಾವಣನು ಬೇಸರದಿಂದಲೂ ಕೋಪದಿಂದಲೂ "ಮಾಡುವುದಾದರೆ ಯುದ್ಧ ಮಾಡು. ಇಲ್ಲದಿದ್ದರೆ ಬಾಯಿ ಮುಚ್ಚಿಕೊಂಡು ಹೋಗಿ ಸುಖವಾಗಿ ಬಿದ್ದುಕೋ" ಎಂದನು.

ನಿದ್ದೆಗೆಟ್ಟು ಕೋಪದಲ್ಲಿ ಕುಂಭಕರ್ಣನು ಯುದ್ಧರಂಗಕ್ಕೆ ಹೋಗಿ ವಾನರರನ್ನು ಹಿಡಿದು ತಿನ್ನಲು ತೊಡಗಿದನು. ರಾಮ ಲಕ್ಷ್ಮಣರು ನಿರ್ವಿರಾಮವಾಗಿ ಯುದ್ಧ ಮಾಡಿದರು. ಆ ಯುದ್ಧದಲ್ಲಿ ರಾಮಬಾಣದಿಂದ ನಖಶಿಖಾಂತ ರಂಧ್ರಮಯ ಶರೀರದವನಾದ ಕುಂಭಕರ್ಣನ ಸಂಹಾರವಾಯಿತು. ವಾನರರ ಭಯ ನೀಗಿತು.

ಆಮೇಲೆ ಯೋಧಾನುಯೋಧರಾದ ರಾವಣನ ರಾಕ್ಷಸ ಪ್ರಮುಖರೆಲ್ಲಾ ರಾಮಲಕ್ಷ್ಮಣರ ಬಾಣಗಳಿಂದ ನೆಲಕ್ಕೊರಗಿದರು. ರಾವಣನ ಹಿರಿಯ ಮಗನಾದ ಇಂದ್ರಜಿತ್ತು ಯುದ್ಧಕ್ಕೆ ಬಂದನು. ಅವನು ರಾವಣನಿಗಿಂತ ಹೆಚ್ಚಿನವನು.

ರಾವಣನು ಅವನ ಮೇಲೆ ಬಹು ದೊಡ್ಡ ನಂಬುಗೆ ಇಟ್ಟುಕೊಂಡಿದ್ದನು. ಅವನು ಮೇಘದೊಳಗಿನಿಂದ ಯುದ್ಧ ಮಾಡಬಲ್ಲವನಾದುದರಿಂದ ಮೇಘನಾದನೆನಿಸಿಕೊಂಡಿದ್ದನು. ಇಂದ್ರನನ್ನು ಜಯಿಸಿ ಕಟ್ಟಿತಂದು ಇಂದ್ರಜಿತ್ತು ಎನಿಸಿಕೊಂಡ ಮಹಾ ವೀರ. ಮಂತ್ರತಂತ್ರಗಳಲ್ಲಿ ಬಲುಗಟ್ಟಿಗ. ಮಹಾ ಮಾಯಾವಿ ಕೂಡಾ. ಹದಿನಾಲ್ಕು ವರ್ಷ ಬ್ರಹ್ಮಚರ್ಯದಲ್ಲಿದ್ದು, ನಿದ್ರಾಹಾರಗಳಿಲ್ಲದ ಕಠೋರ ದೀಕ್ಷೆಯಲ್ಲಿದ್ದವನಿಂದ ಹೊರತು, ಬೇರೆ ಯಾರ ಕೈಯಲ್ಲಿಯೂ ಅವನಿಗೆ ಸಾವು ಬರುವಂತಿಲ್ಲವೆಂದು ವರಬಲ ಪಡೆದವನು.

ಇಂದ್ರಜಿತ್ತು ಮಾಯಾ ಸೀತೆಯನ್ನು ಕಲ್ಪಿಸಿ, ರಾಮನಿಗೆ ಕಾಣುವ ಹಾಗೆ ತುಂಡು ತುಂಡಾಗಿ ಕಡಿದು ಹಾಕಿದನು. ಅದನ್ನು ನೋಡಿ ರಾಮನು ಶೋಕಿಸುವಾಗ, ಲಕ್ಷ್ಮಣನು ಅದೆಲ್ಲಾ ಮಾಯಾಜಾಲವೆಂದು ಅಣ್ಣನಿಗೆ ಧೈರ್ಯ ಹೇಳಿ, ತೀವ್ರವಾಗಿ ಯುದ್ಧ ಮಾಡಿದನು.

ಹಾಗೆಯೇ ರಾವಣನು ವಿದ್ಯುಜ್ಜಿಹ್ವನೆಂಬವನ ಕೈಗೆ ಮಾಯಾಜಾಲದಿಂದ ರಾಮನ ತಲೆಯೊಂದನ್ನು



ತಯಾರಿಸಿಕೊಟ್ಟು, ಶೂಲಕ್ಕೆ ಅದನ್ನು ಚುಚ್ಚಿ ಸೀತೆಗೆ ತೋರಿಸುವಂತೆ ಕಳುಹಿಸಿದನು.

ಸೀತೆ ಅದನ್ನು ನೋಡಿ, "ಇನ್ನು ನಾನು ಮೋಸ ಹೋಗಲಾರೆ. ಇಂತಹ ಕೈಗೆಲಸಗಳಿಗೆ ಬದಲಾಗಿ ನಿಜವಾದ ರಾವಣನ ತಲೆ ನೆಲಕ್ಕುರುಳುವ ದಿನ ಹತ್ತಿರ ಬಂತೆಂದೇ ಇದಕ್ಕೆ ಅರ್ಥ" ಎಂದಳು.

ಇಂದ್ರಜಿತ್ತು ಮೇಘಗಳಲ್ಲಿ ಅಡಗಿ ರಾಮಲಕ್ಷ್ಮಣರ ಮೇಲೆ ನಾಗಾಸ್ತ್ರವನ್ನು ಪ್ರಯೋಗಿಸಿದನು. ಕೂಡಲೇ ಗರುತ್ಮಂತನು ಬಂದು ನಾಗಗಳ ನಿರ್ಮೂಲ ಮಾಡಿ, ಹಾವುಗಳ ಜಾಲದಿಂದ ರಾಮಲಕ್ಷ್ಮಣರನ್ನು ಪಾರು ಮಾಡಿದನು.

ಸೀತಾರಾಮರ ಸೇವೆಯಲ್ಲಿ ತನ್ನನ್ನು ಪೂರ್ತಿ ಮರೆತು, ಹದಿನಾಲ್ಕು ವರ್ಷ ಕಠೋರ ದೀಕ್ಷೆಯಿಂದ ಕಳೆದ ಲಕ್ಷ್ಮಣನ ಕೈಯಲ್ಲಿಯೇ ಇಂದ್ರಜಿತ್ತುವಿನ ಮರಣವು ಬರೆದಿದೆ ಎಂದು ವಿಭೀಷಣನು ಹೇಳಿದನು.

ಲಕ್ಷ್ಮಣನೂ, ವಿಭೀಷಣ ಹನುಮಂತ ಮೊದಲಾದವರೂ ಇಂದ್ರಜಿತ್ತು ಇರುವಲ್ಲಿಗೆ ಹೋದರು. ನಿಕುಂಭಿಲೆಯಲ್ಲಿ ಇಂದ್ರಜಿತ್ತು ಕಪ್ಪು ಹೋತಗಳನ್ನು ಬಲಿಗೊಟ್ಟು ಹೋಮ ಮಾಡಲು ಕುಳಿತಿದ್ದನು. ಹನುಮದಾದಿಗಳು ಆ ಹೋಮವನ್ನು ಧ್ವಂಸ ಮಾಡಿದರು. ಅಲ್ಲಿಯೇ ಲಕ್ಷ್ಮಣನು ಇಂದ್ರಜಿತ್ತುವನ್ನು ಸಂಹರಿಸಿಬಿಟ್ಟನು.

ಎಲ್ಲರನ್ನೂ ಕಳೆದುಕೊಂಡ ರಾವಣನು ಪಾತಾಳ ಲಂಕಾಧಿಪತಿಯಾದ ಮೈರಾವಣನ ಬಳಿಗೆ ಹೋಗಿ, ರಾಮಲಕ್ಷ್ಮಣರನ್ನು ಮಹಾಕಾಳಿಗೆ ಬಲಿಕೊಟ್ಟು ಬಿಡುವಂತೆ ಕೇಳಿಕೊಂಡನು.

ಮಹಾ ಮಾಯಾವಿಯಾದ ಮೈರಾವಣನು ತನ್ನ ಮಾಯೆಯಿಂದ ರಾಮಲಕ್ಷ್ಮಣರಿಗೆ ನಿದ್ದೆ ಬರುವ ಹಾಗೆ ಮಾಡಿ, ಪಾತಾಳ ಲಂಕೆಗೆ ಎತ್ತಿಕೊಂಡು ಹೋಗಿ, ಕಾಳಿಕಾಲಯದಲ್ಲಿ ಅವರನ್ನು ಬಲಿಕೊಡಲು ಏರ್ಪಾಡು ಮಾಡಿದನು.

ಇದನ್ನು ತಿಳಿದು ಹನುಮಂತನು ಪಾತಾಳ ಲಂಕೆಗೆ ಹೋಗಿ ದ್ವಾರಪಾಲಕನಾಗಿದ್ದ ಮತ್ಸ್ಯವಲ್ಲಭನೊಂದಿಗೆ ಹೋರಾಡತೊಡಗಿದನು. ಆಗ ಸುವರ್ಚಲಾದೇವಿ ಹನುಮಂತನನ್ನು ಗುರುತಿಸಿ, ಅವರಿಬ್ಬರೂ ತಂದೆ ಮಗಂದಿರೆಂದು ಹೇಳಿ ಅವರ ಜಗಳ ನಿಲ್ಲಿಸಿದಳು.

ಅಲ್ಲಿಂದ ಹನುಮಂತನು ಸೂಕ್ಷ್ಮರೂಪದಿಂದ ಕಾಳಿಕಾಲಯವನ್ನು ಪ್ರವೇಶಿಸಿ, ರಾಮಲಕ್ಷ್ಮಣರನ್ನು ಹೆಗಲುಗಳ ಮೇಲೆ ಕುಳ್ಳಿರಿಸಿಕೊಂಡು ಹೊರಗೆ ಬಂದನು. ಆಗ ಅಡ್ಡಗಟ್ಟಿದ ಮೈರಾವಣನೊಂದಿಗೆ ರಾಮಲಕ್ಷ್ಮಣರು ಹಾಡಾಹಾಡಿಯಾಗಿ ಯುದ್ಧ ಮಾಡಿದರು.

ರಾಮನನ್ನೇ ತನ್ನ ದೇವನೆಂದು ಭಾವಿಸಿಕೊಂಡಿದ್ದ ಚಂದ್ರಸೇನೆಯನ್ನು ಮೈರಾವಣನು ಸೆರೆಯಲ್ಲಿಟ್ಟಿದ್ದನು. ಆಕೆಯಿಂದ ಹನುಮಂತನು ಮೈರಾವಣನ ಜೀವ ರಹಸ್ಯವನ್ನು ತಿಳಿದುಕೊಂಡು ಅವನ ಜೀವವನ್ನು



ಧ್ವಂಸ ಮಾಡಿದನು. ಅದೇ ವೇಳೆಯಲ್ಲಿ ರಾಮನಿಂದ ಮೈರಾವಣನು ಮತ್ತೆ ಎಂದಿಗೂ ಹುಟ್ಟದಂತೆ ಸತ್ತುಬಿದ್ದನು.

ರಾಮನು ಚಂದ್ರಸೇನೆಗೆ ಆತ್ಮತತ್ವವನ್ನು ಬೋಧಿಸಿ, ಮರು ಜನ್ಮದಲ್ಲಿ ಅವಳು ವಿಷ್ಣುವನ್ನು ಹೊಂದುವಂತೆ ಆಶೀರ್ವಾದ ಮಾಡಿ, ಅವಳ ತಾಪವನ್ನು ಶಾಂತಪಡಿಸಿದನು.

ಈ ರೀತಿಯಾಗಿ ತನ್ನ ಮಾಯೋಪಾಯಗಳೆಲ್ಲಾ ವಿಫಲವಾದ ಮೇಲೆ ರಾವಣನು ಪಾತಾಳ ಲಂಕಾಯಾಗವನ್ನು ಮಾಡಲು ಕುಳಿತನು. ಆ ಸಮಯದಲ್ಲಿ ಹನುಮಂತನು ರಾಮಲಕ್ಷ್ಮಣರನ್ನು ಹೊತ್ತುಕೊಂಡು ಲಂಕೆಗೆ ಬಂದನು. ವಿಭೀಷಣನು ರಾವಣನು ಮಾಡುವ ಯಾಗವನ್ನು ಹೇಳಿ, ಆ ಯಾಗದಿಂದ ಉಕ್ಕಿನಂಥ ಯೋಧರೂ, ಚತುರಂಗ ಬಲಗಳೂ ಉಂಟಾಗುತ್ತವೆಂದನು. ಅದನ್ನು ಭಂಗಪಡಿಸುವ ಉಪಾಯವನ್ನೂ ಹೇಳಿದನು.

ಅಂಗದನು ಅದೃಶ್ಯಕರಣಿ ಎಂಬ ವಿದ್ಯಾಪ್ರಭಾವದಿಂದ ಹೋಗಿ ಮಂಡೋದರಿಯ ತಲೆಗೂದಲನ್ನು ಹಿಡಿದು ಅವಳನ್ನು ದರದರನೆ ಎಳೆದುಕೊಂಡು ರಾವಣನ ಇದಿರಿಗೆ ಹೋದನು, ಆದರಿಂದ ರಾವಣನ ಯಾಗದೀಕ್ಷೆ ಭಗ್ನವಾಗಿಹೋಯಿತು.

ರಾವಣನು ಮೋಸ ಹೋದೆನೆಂದು ತಿಳಿದು ಹತಾಶನಾಗಿ, ಕಡೆಗೆ ಯುದ್ಧ ಮಾಡಲಿಕ್ಕೇ ತಯಾರಾದನು. ಆಗ ಕೂಡ ಮಂಡೋದರಿ ರಾವಣನೊಂದಿಗೆ, ಈಗಲಾದರೂ ಸೀತೆಯನ್ನು ರಾಮನಿಗೆ ಒಪ್ಪಿಸುವಂತೆ ಹಿತವನ್ನು ಹೇಳಿ ಬೇಡಿಕೊಂಡಳು.

"ರಾವಣನು ರಾವಣನೇ!" ಎಂದು ಸಿಂಹಗರ್ಜನೆ ಮಾಡಿ, ರಾವಣನು ಹತ್ತು ಕುದುರೆಗಳನ್ನು ಹೂಡಿದ ರಥದ ಮೇಲೇರಿ ರಾಮನ ಮುಂದೆ ಯುದ್ಧಕ್ಕೆ ಹೋದನು.

ತನ್ನ ಮಗ ಇಂದ್ರಜಿತ್ತುವನ್ನು ಕೊಂದ ಲಕ್ಷ್ಮಣನನ್ನು ನೋಡಿದ ಕೂಡಲೇ ರಾವಣನ ಆಗ್ರಹಾವೇಶವು ಮಿತಿಮೀರಿತು, ಶೂರ್ಪನಖಿಯನ್ನು ಅವಮಾನಪಡಿಸಿದವನೂ ಈ ಲಕ್ಷ್ಮಣನೇ! ಹಿಂದೆ ದೇವೇಂದ್ರನು ತನ್ನ ಬಂಧ ವಿಮೋಚನೆಗೆ ಪಣವಾಗಿ ಶಕ್ತಿ ಎಂಬ ಮಹಾಯುಧಾಸ್ತ್ರ ಒಂದನ್ನು ರಾವಣನಿಗೆ ಕೊಟ್ಟಿದ್ದನು. ಆ ಅಸ್ತ್ರವನ್ನು ಈಗ ರಾವಣನು ಲಕ್ಷ್ಮಣನ ಮೇಲೆ ಪ್ರಯೋಗಿಸಿದನು, ಅದರ ಹವೆಯಿಂದ ಲಕ್ಷ್ಮಣನು ನೆಲಕ್ಕೆ ಬಿದ್ದನು.

ಹನುಮಂತನು ಕ್ಷಣಮಾತ್ರದಲ್ಲಿ ಹಿಮಾಲಯ ಪರ್ವತಕ್ಕೆ ಹೋಗಿ ಸೂರ್ಯೋದಯವಾಗುವುದರೊಳಗೆ ಸಂಜೀವಿನಿ ಮೂಲಿಕೆಯನ್ನು ತಂದು ಲಕ್ಷ್ಮಣನನ್ನೂ, ಇತರ ವಾನರರನ್ನೂ ಸ್ವಸ್ಥರಾಗಿ ಏಳುವಂತೆ ಮಾಡಿದನು.

ರಾಮರಾವಣರ ಯುದ್ಧವು ನಡೆಯುತ್ತಿರುವಾಗ, ಇಂದ್ರನು ರಾಮನಿಗೆ ಮಾತಲಿಯ ಸಾರಥ್ಯದಲ್ಲಿರುವ ದಿವ್ಯ ರಥವನ್ನು ಕಳುಹಿಸಿದನು.

ರಾಮ ರಾವಣರ ಭೀಷಣ ಸಂಗ್ರಾಮದಲ್ಲಿ ರಾವಣನ ತಲೆಗಳು ನೆಲದ ಮೇಲೆ ಉರುಳಿದರೂ ಮತ್ತೆ ಮತ್ತೆ ತಲೆಗಳು ಮೊಳೆಯುತ್ತಿದ್ದವು. ಆಗ ವಿಭೀಷಣನು ರಾವಣನ ಹೊಟ್ಟೆಯಲ್ಲಿರುವ ಅಮೃತ ಭಾಂಡವು ಕಿತ್ತು ಬೀಳುವಂತೆ ಎದೆಯನ್ನು ಭೇದಿಸಲು ಹೇಳಿದನು. ರಾಮನು ಬ್ರಹ್ಮಾಸ್ತ್ರದಿಂದ ಹಾಗೆಯೇ ಮಾಡಿದನು. ರಾವಣನು ಒಂಟಿ ತಲೆಯೊಂದಿಗೆ ಏಕಾಕಿಯಾಗಿ ಬಿದ್ದು ಪ್ರಾಣಬಿಟ್ಟನು.

ಈ ವಿಧವಾಗಿ ಗುಟ್ಟುಗಳನ್ನು ರಟ್ಟುಮಾಡಿದ ವಿಭೀಷಣನಿಂದ "ಸಂಸಾರ ಲಂಕಾವ್ಯಾಧಿರಟ್ಟು" ಎಂಬ ಸಾಮತಿಗೆ ಮೂಲವಾಯಿತು.

ರಾವಣ ಸಂಹಾರದಿಂದ ಲಂಕಾ ರಾಜ್ಯವು ಪತನವಾಗಿ, ದುಷ್ಟ ರಾಕ್ಷಸ ರಾಜ್ಯಭಾರವು ಅಂತರಿಸಿ, ವಿಭೀಷಣನು ಲಂಕೆಯ ರಾಜನಾದನು.

ರಾವಣ ಕುಂಭಕರ್ಣರ ಮರಣದಿಂದ ಜಯ ವಿಜಯರ ಎರಡನೇ ಜನ್ಮವು ಮುಗಿಯಿತು.

ಅಶೋಕ ವನದೊಳಗಿದ್ದ ಸೀತೆ ರಾಮನ ಮುಂದೆ ಬಂದು ನಿಂತಳು. ಆಗ ರಾಮನು ಸೀತೆಯೊಂದಿಗೆ, "ಸೀತೇ, ದುಷ್ಟರನ್ನು ಶಿಕ್ಷಿಸಿ ನನ್ನ ಕರ್ತವ್ಯವನ್ನು ನಿರ್ವಹಿಸಿಯಾಯಿತು. ನಿನ್ನನ್ನು ರಾವಣನು ಎತ್ತಿಕೊಂಡು ತಂದು ಲಂಕೆಯಲ್ಲಿ ಇರಿಸಿದ್ದಾನೆ. ಅಂತಹ ನಿನ್ನನ್ನು ನಾನು ಹೇಗೆತಾನೇ ಸ್ವೀಕರಿಸಲು ಸಾಧ್ಯ? ಹೇಗೆ ಅಯೋಧ್ಯೆಗೆ ಕರೆದುಕೊಂಡು ಹೋಗಲಿ? ಆದುದರಿಂದ ಇನ್ನು ಮೇಲೆ ನೀನು ನಿನ್ನ ಇಷ್ಟಾನುಸಾರವಾಗಿಯೇ ನಡೆಯಬಹುದು" ಎಂದು ಹೇಳಿದನು.

ಸೀತೆ ಅಲ್ಲಿರುವವರಿಗೆ ಆಜ್ಞಾಪಿಸುವ ರೀತಿಯಲ್ಲಿ ತನಗಾಗಿ ಅಗ್ನಿಕುಂಡವನ್ನು ನಿರ್ಮಿಸಲು ಹೇಳಿದಳು.

ಆಮೇಲೆ ಸೀತೆ ರಾಮನ ಪಾದಗಳಲ್ಲೇ ದೃಷ್ಟಿಯನ್ನಿಟ್ಟು ನಮಸ್ಕರಿಸಿ ಅಗ್ನಿಯೊಳಗೆ ಹಾರಿದಳು. ಜ್ವಾಲೆಗಳು ಆಕಾಶದಷ್ಟೆತ್ತರವಾದುವು.

ಆ ಜ್ವಾಲೆಯೊಳಗಿನಿಂದ ಅಗ್ನಿದೇವನು ಸೀತೆಯನ್ನು ಆಗಲೇ ಅರಳಿದ ಪದ್ಮದ ಹಾಗೆ ತನ್ನ ಅಂಜಲಿಗಳಲ್ಲಿ ಎತ್ತಿಕೊಂಡು ರಾಮನ ಮುಂದೆ ನಿಲ್ಲಿಸಿ, "ರಾಮಾ, ಸೀತೆ ಬೆಂಕಿಯಂಥವಳು. ಪರಮ ಪಾವನೆ! ಸ್ವೀಕರಿಸು" ಎಂದನು.

ಅದೇ ಸಮಯದಲ್ಲಿ ಸ್ವರ್ಗದಿಂದ ದಶರಥನು ವಿಮಾನದಲ್ಲಿ ಕಾಣಿಸಿ, "ಅಪ್ಪಾ, ರಾಮಚಂದ್ರಾ! ಅಗ್ನಿಪರೀಕ್ಷೆಯಲ್ಲಿ ಸೀತೆ ಪವಿತ್ರಳೆಂದು ನಿರೂಪಣೆಯಾಯಿತು. ಸೀತೆಯೊಂದಿಗೆ ಅಯೋಧ್ಯೆಗೆ ಹೋಗಿ ರಾಜ್ಯಪಾಲನೆ ಮಾಡು" ಎಂದು ಉಪದೇಶಿಸಿದನು.

ರಾಮನು ಎಷ್ಟು ಮಂದಿ ಹತ್ತಿದರೂ ತುಂಬದಿರುವ ಪುಷ್ಪಕ ವಿಮಾನದಲ್ಲಿ ಎಲ್ಲರೊಂದಿಗೂ ಅಯೋಧ್ಯೆಗೆ ಬಂದು ಸೇರಿದನು.





ಹಿಂದೆ ಪರ್ಷಿಯಾ ದೇಶದೊಳಗಿನ ಒಂದಾನೊಂದು ಪ್ರಾಂತದಲ್ಲಿ ಕಬರಿಸ್ಥಾನ್ ಎಂಬ ಚಿಕ್ಕದೊಂದು ರಾಜ್ಯವಿದ್ದಿತು. ಅದನ್ನು ಪಾಲಿಸುವ ರಾಜನಿಗೆ ಇಬ್ಬರು ವಜೀರರಿದ್ದರು. ಒಬ್ಬನು ದೊಡ್ಡ ವಜೀರ, ಇನ್ನೊಬ್ಬನು ಸಣ್ಣ ವಜೀರ.

ದೊಡ್ಡ ವಜೀರನಿಗೆ ಅತ್ಯಂತ ಸುಂದರಿಯಾದ ಕುಮಾರಿಯೊಬ್ಬಳಿದ್ದಳು. ಅವಳನ್ನು ನೋಡಿದ ರಾಜನು ಒಂದು ದಿನ ದೊಡ್ಡ ವಜೀರನನ್ನು ಕರೆದು, "ವಜೀರ್! ನಿನಗೊಂದು ಸಂತೋಷವಾಗುವಂಥ ವಾರ್ತೆ! ನಿನ್ನ ಕುಮಾರಿಯನ್ನು ನಾನು ಮದುವೆಯಾಗಲು ಇಷ್ಟಪಟ್ಟಿದ್ದೇನೆ. ಮುಹೂರ್ತ ಎಷ್ಟು ಬೇಗ ನೋಡಿದರೆ ಅಷ್ಟು ಒಳ್ಳೇದು" ಎಂದನು.

ವಜೀರನು ಬೆರಗಾಗಿ ಕ್ಷಣಕಾಲ ಮೂಕನಾಗಿ, ಆಮೇಲೆ, "ಪ್ರಭೂ! ನನ್ನ ಕುಮಾರಿ ವಿದ್ಯಾವತಿ. ತಿಳುವಳಿಕೆಯುಳ್ಳವಳು. ದೊಡ್ಡ ದೈವಭಕ್ತೆ ಕೂಡಾ. ಈ ಮದುವೆಯ ವಿಷಯ ಮೊದಲು ಅವಳೊಂದಿಗೆ ಮಾತಾಡಬೇಕು" ಎಂದನು.

"ಮಾತಾಡು ಬೇಗ! ತನಗೆ ಬಂದ ಅದೃಷ್ಟಕ್ಕೆ ಸಂತೋಷದಿಂದ ಉಬ್ಬಿ ಹೋಗುತ್ತಾಳೆ. ಬೇಗ ಹೋಗಿ ನಿನ್ನ ವಿದ್ಯಾವತಿ ಕುಮಾರಿಗೆ ತಿಳಿಸು ಈ ಶುಭವಾರ್ತೆ" ಎಂದನು ಗರ್ವದಿಂದ ಆ ರಾಜ.

ಆದರೆ ವಜೀರನು ಈ ಸಂಗತಿಯನ್ನು ಅವಳೊಡನೆ ಹೇಳಿದಾಗ ಅವಳು, ಸಂತೋಷಿಸುವುದಕ್ಕೆ ಬದಲಾಗಿ ಪರಮ ಅಸಹ್ಯದಿಂದ, "ಬೇಡಪ್ಪಾ. ಈ ರಾಜನನ್ನು ನಾನು ಮದುವೆಯಾಗಲಾರೆ. ಆತನ ಅಂತಃಪುರದಲ್ಲಿರುವ ಸ್ತ್ರೀಯರ ಹಾಗೆ ನಾನೂ ಗುಲಾಮಳಾಗಿರಬೇಕು. ಅದು ನನ್ನಿಂದಾಗದು" ಎಂದಳು.

ದೊಡ್ಡ ವಜೀರನು ಈ ಸಂಗತಿಯನ್ನು ರಾಜನೊಡನೆ ಹೇಳಿದ ಕೂಡಲೇ, ಅವನು ಅತ್ಯುಗ್ರನಾಗಿ, "ನಾನು ಬಲವಂತದಿಂದಾದರೂ ಸರಿಯೆ, ನಿನ್ನ ಮಗಳನ್ನು ಮದುವೆಯಾಗುತ್ತೇನೆ. ನನ್ನನ್ನು ತಡೆಯುವವರಾರೋ ನೋಡುತ್ತೇನೆ" ಎಂದು ಜೋರಾಗಿ ಗರ್ಜಿಸಿದನು.

ಇನ್ನು ನಗರದಲ್ಲಿರುವುದು ಅಪಾಯವೆಂದು ದೊಡ್ಡ ವಜೀರನೂ, ಮಗಳೂ ಕುದುರೆಗಳನ್ನೇರಿ ನಗರವನ್ನು ಬಿಟ್ಟು ಓಡಿ ಹೋಗಲು ತೊಡಗಿದರು. ಆದರೆ ವಿಧಿ ಬಿಡಲಿಲ್ಲ. ಗೂಢಚಾರರ ಮೂಲಕವಾಗಿ ಈ ಸಂಗತಿಯನ್ನು ತಿಳಿದ ರಾಜನು, ಕೂಡಲೇ

ಅರೇಬಿಯಾ ಕಥೆ



ತನ್ನ ಅಂಗರಕ್ಷಕರೊಂದಿಗೆ ಕುದುರೆಯ ಮೇಲೇರಿ ಅವರನ್ನು ಹಿಡಿಯಲು ಅವರು ಹೋದ ದಾರಿಯನ್ನು ಹಿಡಿದು ಧಾವಿಸಿದನು.

ಒಂದು ಗಂಟೆಯ ಮೇಲೆ ರಾಜನು ದೊಡ್ಡ ವಜೀರನನ್ನೂ ಅವನ ಮಗಳನ್ನೂ ಹಿಡಿದೇ ಬಿಟ್ಟನು. ಆಗ ಸ್ವಲ್ಪವೂ ದಾಕ್ಷಿಣ್ಯವಿಲ್ಲದೆ ರಾಜನು ದೊಡ್ಡ ವಜೀರನ ತಲೆಯನ್ನು ಕತ್ತಿಯಿಂದ ಕಡಿದು, ಅವನ ಮಗಳನ್ನು ಬಲವಂತವಾಗಿ ನಗರಕ್ಕೆ ತೆಗೆಯಿಸಿಕೊಂಡು ಬಂದನು.

"ಅಂ! ನಿನಗೆಷ್ಟು ಗರ್ವ! ರಾಜನಾಗಿರುವ ನನ್ನನ್ನು ಮದುವೆಯಾಗಲು ನಿರಾಕರಿಸುವಿಯೇನು? ಈಗ ಯಾರು ನಿನಗೆ ದಿಕ್ಕು?" ಎಂದು ರಾಜನು ವಜೀರನ ಮಗಳನ್ನು ಕೋಪದಿಂದ ಕೇಳಿದನು.

"ಈಗ ನಾನಾಗಿ ಏನು ಮಾಡಲಿಕ್ಕೂ ಸಾಧ್ಯವಿಲ್ಲ. ಆ ದೇವರೇ ನನಗೆ ದಿಕ್ಕು!" ಎಂದಳು ಸತ್ತ ವಜೀರನ ಮಗಳು.

ಮರುದಿನವೇ ರಾಜನ ಕಿವಿಗೆ ಕೆಟ್ಟದೊಂದು ಸುದ್ದಿ ಬಂತು. ಆ ರಾಜ್ಯದ ಒಂದು ಕಡೆಯಲ್ಲಿ ಪ್ರಜೆಗಳು ಬಂಡಾಯವೆದ್ದು ನಗರವನ್ನು ಹಿಡಿಯಲು ಧಾವಿಸುತ್ತಿದ್ದಾರೆಂಬುದೇ ಆ ವಾರ್ತೆ. ಕೂಡಲೇ ರಾಜನು ದೊಡ್ಡ ವಜೀರನ ಮಗಳು ಓಡಿ ಹೋಗದ ಹಾಗೆ ನೋಡಲು ಸಣ್ಣ ವಜೀರನಿಗೆ ಹೇಳಿ, ಸೈನ್ಯದೊಂದಿಗೆ ಬಂಡಾಯವನ್ನು ಅಡಗಿಸಲು ಹೊರಟು ಹೋದನು.

ದೊಡ್ಡ ವಜೀರನ ಮಗಳು ಅಂತಃಪುರದೊಳಗೆ ಚಿಕ್ಕದೊಂದು ಕೋಣೆಯಲ್ಲಿ ಬಂಧಿಸಲ್ಪಟ್ಟಿದ್ದಳು. ಸಣ್ಣ ವಜೀರನು ಕಿಟಿಕಿಯಿಂದ ಅವಳನ್ನು ನೋಡಿ, ಅವಳ ಸೌಂದರ್ಯಕ್ಕೆ ಪರವಶನಾಗಿ ಹೋದನು. ಅವನು ತನಗೆ ನಂಬುಗಸ್ಥಳಾದ ಒಬ್ಬಳು ದಾಸಿಯನ್ನು ವಜೀರನ ಕುಮಾರಿಯ ಬಳಿಗೆ ಕಳುಹಿಸಿಕೊಟ್ಟನು.

ಆ ದಾಸಿ ವಜೀರನ ಮಗಳೊಂದಿಗೆ, "ನಮ್ಮ ಯಜಮಾನ ಸಣ್ಣ ವಜೀರರಿಗೆ ನಿನ್ನ ಮೇಲೆ ಬಹಳ ಅಭಿಮಾನ ಉಂಟಾಗಿ ಬಿಟ್ಟಿದೆ. ಇಲ್ಲಿ ಪಕ್ಕದಲ್ಲಿಯೇ ಅವರಿಗೊಂದು ಅಂದವಾದ ಹೂದೋಟವಿದೆ. ನೀನು ಹೋಗಿ ಅವರೊಂದಿಗೆ ಹಾಯಾಗಿ ತೋಟದಲ್ಲಿ ತಿರುಗಾಡಿ ಬರಬಹುದು. ಈ ಸಂಗತಿ ರಾಜನಿಗೆ ತಿಳಿಯುವ ಅವಕಾಶವೇ ನಿಲ್ಲ. ಬರುವಿಯಾ?" ಎಂದಳು.

ಅದನ್ನು ಕೇಳಿ ವಜೀರನ ಮಗಳು ಬಹಳ ಚಿಂತೆಯಿಂದ, "ಈಗ ಇರುವ ನನ್ನ ಪರಿಸ್ಥಿತಿ ಹೂದೋಟದಲ್ಲಿ ತಿರುಗಾಡುವ ಹಾಗೆ ಇದೆಯಾ? ನನ್ನ ಅಪ್ಪ ನನ್ನ ಕಣ್ಣೆದಿರೇ ಕೊಲ್ಲಲ್ಪಟ್ಟರು. ನನ್ನನ್ನು ಬಲವಂತವಾಗಿ ಇಲ್ಲಿಗೆ ಎಳೆದು ತಂದು ಹೀಗೆ ಬಂಧಿಸಿ ಇಟ್ಟಿದ್ದಾರೆ. ಇನ್ನೆಂದಿಗೂ ಹೀಗೆಲ್ಲಾ ವಾರ್ತೆ ಕಳಿಸಬೇಡವೆಂದು ನಿನ್ನ ಯಜಮಾನನಿಗೆ ಹೇಳು" ಎಂದು ಉತ್ತರ ಕೊಟ್ಟಳು.

ಆ ದಾಸಿ ಹಿಂದಿರುಗಿ ಬಂದು ಹೇಳಿದ ಮಾತನ್ನು ಕೇಳಿ ಸಣ್ಣ ವಜೀರನು ತುಂಬಾ ಹೆದರಿದನು.

ದೊಡ್ಡ ವಜೀರನ ಮಗಳು ಈ ಸಂಗತಿಯನ್ನು ರಾಜನೊಂದಿಗೆ ಹೇಳಿಬಿಟ್ಟರೆ, ಅವಳ ಅಪ್ಪನ ಗತಿಯೇ ತನಗೂ ಆಗಬಹುದೆಂದು ನಡುಗಿದನು. ತಾನೇಕೆ ಅವಳನ್ನು ನೋಡಿದೇನೋ ಅನಿಸಿತು ಅವನಿಗೆ.

ರಾಜನು ಬಂಡಾಯವನ್ನು ಮುರಿದು ಹಿಂದಿರುಗಿ ಬಂದ ಮೇಲೆ, "ಹೇಗಿದ್ದಾಳೆ ವಜೀರನ ಮಗಳು ?" ಎಂದು ಆತುರದಿಂದ ಕೇಳಿದನು. ಕೂಡಲೇ ಸಣ್ಣ ವಜೀರನು ತಾನು ಆಲೋಚನೆ ಮಾಡಿಟ್ಟುಕೊಂಡಂತೆ, "ಪ್ರಭೂ, ಅವಳು ತಮ್ಮಂಥವರಿಗೆ ಹೆಂಡತಿಯಾಗುವ ಯೋಗ್ಯತೆಯವಳಲ್ಲ. ನೀವು ಅತ್ತ ಹೋದ ಕೂಡಲೇ, ಅವಳು ಒಬ್ಬಳು ದಾಸಿಯನ್ನು ನನ್ನ ಬಳಿಗೆ ಕಳುಹಿಸಿದಳು. ಅವಳು ಹೇಳಿದ್ದೇನೆಂದರೆ, ವಜೀರನ ಕುಮಾರಿ ನನ್ನ ಜತೆಯಲ್ಲಿ ಬೇರೆ ಯಾವ ದೇಶಕ್ಕಾದರೂ ಓಡಿಹೋಗಲು ತಯಾರಾಗಿದ್ದಾಳಂತೆ! ಅಲ್ಲಿ ನಾನು ಅವಳನ್ನು ಮದುವೆ ಮಾಡಿಕೊಂಡು ಸುಖವಾಗಿರಬಹುದಂತೆ ! ನಾನು ಕಣ್ಣು ಕಿವಿ ಮುಚ್ಚಿಕೊಂಡು ಒಪ್ಪದೆ ಜೋರಾಗಿ ನಿಂದಿಸಿ ಗದರಿಸಿ ಹೆದರಿಸಿಟ್ಟಿದ್ದೇನೆ. ಇನ್ನೇನು ತಾನೇ ಮಾಡಲಿ ?" ಎಂದು ಸುಳ್ಳು ಹೇಳಿದನು.

ರಾಜನು ಹಿಡಿಸಲಾಗದಷ್ಟು ಕೋಪದಿಂದ, "ಹಾಗೇನು ! ಅಂತಹ ಮಹಾ ದುಷ್ಟಳನ್ನು ಹೇಗೆ ಕೊಲ್ಲುವುದು ? ಶಿರಚ್ಛೇದ ಮಾಡಲೇ ? ಪ್ರಾಣದೊಂದಿಗೆ ಹುಗಿಸಲೇ ? ಕೈಬಾಯಿ ಕಟ್ಟಿ ತಲೆಕೆಳಗಾಗಿ ನೀರಿಗೆ ಮುಳುಗಿಸಲೇ ?" ಎಂದು ಚೀರಿದನು.

ಸಣ್ಣ ವಜೀರನು ಏನೋ ಹೇಳಬೇಕೆಂದಿರಲು, ಅಲ್ಲಿದ್ದ ಮುದಿ ನೌಕರನು ಮುಂದೆ ಬಂದು, "ಪ್ರಭೂ, ಇಂಥವಳಿಗೆ ಬೆಂಗಾಡೇ ಬುದ್ಧಿ ಕಲಿಸಬೇಕು. ಇವಳನ್ನು ದೊಡ್ಡ ಬೆಂಗಾಡಿನಲ್ಲಿ ಬಿಟ್ಟು ಬರುವುದೇ ಒಳ್ಳೇದು. ಅಲ್ಲಿ ಸಾವೋ ಬದುಕೋ ವಿಧಿಯೇ ನಿರ್ಣಯಿಸಿ



ಬಿಡುತ್ತದೆಂಬುದು ನನ್ನದೊಂದು ವಿನಮ್ರ ಸಲಹೆ !" ಎಂದು ಕೈಮುಗಿದು ಬಾಗಿ ಸಲಹೆ ಮಾಡಿದನು.

"ಹಾಗೇ ಮಾಡಿಬಿಡಿರಿ !" ಎಂದನು ರಾಜ.

ಭಟರು ಅವಳನ್ನು ಗುಡ್ಡ, ತಗ್ಗುಗಳಾಗಿ ಕಾಣುವ ಒಂದು ಮರುಭೂಮಿಗೆ ಒಯ್ದು ಅಲ್ಲಿ ಬಿಟ್ಟು ಹಿಂದಿರುಗಿದರು. ವಜೀರನ ಮಗಳು ಕೈಗಳೆರಡನ್ನೂ ಆಕಾಶಕ್ಕೆತ್ತಿ, ದೇವರ ಪ್ರಾರ್ಥನೆ ಮಾಡುತ್ತಾ ನಿಂತು ಬಿಟ್ಟಳು. ಆ ಸಮಯದಲ್ಲಿ ಆ ಕಡೆಗಾಗಿ ಒಬ್ಬನು ಒಂಟೆಗಳನ್ನು ಒಯ್ಯುತ್ತಾ ಬಂದು ಅವಳನ್ನು ನೋಡಿದನು.

ಅವನು ವಜೀರನ ಕುಮಾರಿಯ ಸ್ಥಿತಿಯನ್ನು ಊಹಿಸಿ, ಅವಳ ಹತ್ತಿರ ಬಂದು, "ಅಮ್ಮಾ, ಹೆದರಬೇಡ, ನೀನು ನಮ್ಮ ಮನೆಗೆ ಬಾ. ಆಮೇಲೆ ವಿಚಾರಿಸುತ್ತೇನೆ" ಎಂದನು ಕರುಣೆಯಿಂದ.

ವಜೀರನ ಮಗಳು ಅವನಿಗೆ ವಂದಿಸಿ ಕೃತಜ್ಞತೆ ಹೇಳಿ, "ಅಯ್ಯಾ, ನನ್ನನ್ನು ಇಲ್ಲಿಯೇ ಇರಲು



ಬಿಟ್ಟುಬಿಡಿ. ಮೊದಲು ಬಾಯಾರಿಕೆ ತೀರಿಸಿಕೊಳ್ಳಲು ನೀರಿರುವ ಸ್ಥಳ ತೋರಿಸಿದರೆ ಸಾಕು. ಆ ಉಪಕಾರ ಎಂದೂ ಮರೆಯಲಾರೆ" ಎಂದಳು.

ಒಂಟೆಗಳನ್ನು ಒಯ್ಯುವವನು ಅವಳನ್ನು ದೊಡ್ಡದೊಂದು ನೀರು ತುಂಬಿದ ಕೆರೆಯ ಕಡೆಗೆ ಕರೆದುಕೊಂಡು ಹೋಗಿಬಿಟ್ಟನು. ಅವನು ನೆರೆಯಲ್ಲೇ ಇರುವ ಒಂದು ದೇಶದ ಯುವರಾಜನ ನೌಕರನು. ಅಲ್ಲಿಯ ರಾಜನಿಗೆ ದೊಡ್ಡ ಸೈನಿಕ ಬಲವಿದ್ದಿತು. ನೌಕರನು ಅಲ್ಲಿಯ ಯುವರಾಜನೊಂದಿಗೆ, ವಜೀರನ ಕುಮಾರಿಯನ್ನು ಕುರಿತು ಹೇಳಿದನು.

ಯುವರಾಜನು ಆಕೂಡಲೇ ಹೊರಟು ವಜೀರನ ಮಗಳಿರುವ ಸ್ಥಳಕ್ಕೆ ಬಂದನು. ಅಷ್ಟೊಂದು ಸೌಂದರ್ಯದ ರಾಶಿಯಂಥ ಹುಡುಗಿಯನ್ನು ಅದುವರೆಗೂ ಅವನು ನೋಡಿರಲಿಲ್ಲ.

ಯುವರಾಜನು ವಜೀರನ ಕುಮಾರಿಯೊಂದಿಗೆ ತಾನು ಯಾರೆಂಬುದನ್ನು ಹೇಳಿಕೊಂಡು, "ನೀನು ನಗರಕ್ಕೆ ಬಂದು ನಮ್ಮ ಆತಿಥ್ಯ ಸ್ವೀಕರಿಸಬೇಕು" ಎಂದು ಕರೆದನು.

ದೊಡ್ಡ ವಜೀರನ ಮಗಳು ಅದಕ್ಕೆ ಅಂಗೀಕಾರ ತೋರಿಸದೆ, ತಾನು ಈ ಬೆಂಗಾಡಿನ ಹತ್ತಿರವಿರುವ ಕೊಳದ ಹತ್ತಿರವೇ ಇರುತ್ತೇನೆಂದು ದೃಢ ಮನಸ್ಸಿನಿಂದ ಹೇಳಿಬಿಟ್ಟಳು.

ಯುವರಾಜನು ನಗರಕ್ಕೆ ಹಿಂದಿರುಗಿದನು. ಆ ರಾತ್ರಿ ಅವನಿಗೆ ಸರಿಯಾಗಿ ನಿದ್ದೆಯೇ ಬರಲಿಲ್ಲ. ಬೆಂಗಾಡಿನಲ್ಲಿ ಒಬ್ಬಂಟಿಗಳಾಗಿರುವ ವಜೀರನ ಕುಮಾರಿಗೆ ಏನಾದರೂ ಅಪಾಯ ಬಂದೀತೇ ಎಂದು ಅವನಿಗೆ ಅನುಮಾನವಾಯಿತು.

ಅವನು ಮರುದಿನ ರಾತ್ರಿ ಆ ಕೊಳದ ಹತ್ತಿರ ಹೋಗಿ ಒಂದು ಮರದ ಕೆಳಗೆ ಕುಳಿತುಬಿಟ್ಟನು. ಬೆಳಗಾದಾಗ ವಜೀರನ ಮಗಳು ಅವನನ್ನು ನೋಡಿ ಆಶ್ಚರ್ಯಪಟ್ಟು, "ನೀವು ರಾಜ್ಯವನ್ನು ಆಳುವವರು, ನಗರವನ್ನು ಬಿಟ್ಟು ಹೀಗೆ ಬರುವುದು ಒಳ್ಳೆಯದಲ್ಲ. ಹಿಂದಿರುಗಿ ಹೋಗಿ ಪರಿಪಾಲನೆಯ ವ್ಯವಹಾರ ನೋಡಿಕೊಳ್ಳಿರಿ. ನನ್ನಂಥವಳ ಚಿಂತೆ ನಿಮಗೆ ಬೇಡ" ಎಂದಳು.

"ನೀನು ಹೇಳಿದ ಮಾತು ನ್ಯಾಯವಾದುದೇ. ಆದರೆ ನೀನು ನನ್ನನ್ನು ವಿವಾಹ ಮಾಡಿಕೊಳ್ಳಲು ಒಪ್ಪಿಕೊಂಡರೆ ಹೊರತು ತಿರುಗಿ ಹೋಗಲಾರೆ" ಎಂದನು ಯುವರಾಜ.

ಅವನ ಮಾತು ಕೇಳಿ ವಜೀರನ ಮಗಳು ಕಣ್ಣೀರು ತುಂಬಿಕೊಂಡು, "ನನ್ನನ್ನು ಕಾಪಾಡುವ ಪ್ರಯತ್ನದಲ್ಲಿ ನನ್ನ ತಂದೆ ದುರ್ಮರಣ ಹೊಂದಿದರು. ತಾನು ಎಷ್ಟೋ ವಿಶ್ವಾಸದಿಂದ ಸೇವೆ ಮಾಡಿದ ರಾಜನೇ ದುಷ್ಟನಾಗಿ ಅವರನ್ನು ಕೈಯಾರೆ ಕೊಂದಿದ್ದಾನೆ. ಅದಕ್ಕೆ ತಕ್ಕ ಪ್ರತೀಕಾರವಾಗದೆ ನಾನು ಮದುವೆಯನ್ನು ಕುರಿತು ಆಲೋಚಿಸಲು ಸಾಧ್ಯವೇ ಇಲ್ಲ" ಎಂದಳು.

ಹಿಂದೆ ನಡೆದ ಎಲ್ಲಾ ಸಂಗತಿಗಳನ್ನೂ ವಿವರಿಸಿ ಹೇಳಿದಳು.

ಕೂಡಲೇ ಯುವರಾಜನು ನಗರಕ್ಕೆ ಹೋಗಿ ತನ್ನ ಸೇನಾಧಿಪತಿಯ ಮುಖಂಡತ್ವದಲ್ಲಿ ದೊಡ್ಡದೊಂದು ಸೈನ್ಯವನ್ನು ಕಬರಿಸ್ಥಾನದ ಮೇಲೆ ಕಳುಹಿಸಿದನು. ಆ ಸೇನಾಧಿಪತಿ ರಾಜನನ್ನೂ, ಸಣ್ಣ ವಜೀರನನ್ನೂ ಹೆಡೆಮುರಿಗೆ ಕಟ್ಟಿ ಯುವರಾಜನ ಬಳಿಗೆ ತಂದನು.

ಯುವರಾಜನು ಆ ಬಂದಿಗಳನ್ನು ಕರೆದುಕೊಂಡು ದೊಡ್ಡ ವಜೀರನ ಮಗಳ ಬಳಿಗೆ ಹೋದನು. ಅವಳು ಹಿಂದೆ ತನಗೆ ಶಿರಚ್ಛೇದವಾಗದಂತೆ ಕಾಪಾಡಿದ ವೃದ್ಧ ನೌಕರನನ್ನು ಕೂಡಾ ಕರೆದುಕೊಂಡು ಬರಬೇಕೆಂದು ಕೇಳಿಕೊಂಡಳು. ಸೈನಿಕರು ಅವನನ್ನು ಕಂಡು ಹಿಡಿದು ಗೌರವದಿಂದ ಕರೆದುಕೊಂಡು ಬಂದು ಅವಳ ಮುಂದೆ ನಿಲ್ಲಿಸಿದರು.

ಆಮೇಲೆ ಅವರನ್ನೆಲ್ಲ ಸಾಗಿಸಿಕೊಂಡು ಯುವರಾಜನೂ ವಜೀರನ ಕುಮಾರಿಯೂ ನಗರವನ್ನು ಸೇರಿದರು. ಅಲ್ಲಿ ವಜೀರನ ಕುಮಾರಿಯ ಕೋರಿಕೆಯಂತೆ ಸಭೆ ಸೇರಿಸಲಾಯಿತು. ಅಲ್ಲಿ ಅವಳು ತುಂಬಿದ ಸಭೆಯಲ್ಲಿ ಬಂದೀಯಾದ ಸಣ್ಣ ವಜೀರನಿಗೆ ನಡೆದ ಸತ್ಯಸಂಗತಿಯನ್ನು ಹೇಳುವಂತೆ ಹೇಳಿದಳು. ಆ ವಜೀರನು ಪ್ರಾಣಭಯದಿಂದ, ತಮ್ಮ ರಾಜನ ಮುಂದೆ ತಾನು ಸುಳ್ಳು ಹೇಳಿದೆನೆಂದು ಸತ್ಯವನ್ನೆಲ್ಲ ಹೇಳಿ, ಕ್ಷಮಿಸಬೇಕೆಂದು ಬೇಡಿಕೊಂಡನು.

ಯುವರಾಜನು ಅವನನ್ನು ಮರುಭೂಮಿಗೆ ಎಳೆದೊಯ್ದು ಬಿಟ್ಟು ಬರಬೇಕೆಂದು ಸೈನಿಕರಿಗೆ ಆಜ್ಞೆ ಮಾಡಿದನು. ಕೆಲವು ದಿನಗಳ ಮೇಲೆ ಆ ದಾರಿಯಲ್ಲಿ ಸಾಗುತ್ತಿದ್ದ ವರ್ತಕರು, ಸಣ್ಣ ವಜೀರನು ಅಲ್ಲಿ ಸತ್ತು ಬಿದ್ದಿರುವುದನ್ನು ನೋಡಿದರಂತೆ.

ಇನ್ನು ದುಷ್ಟನಾದ ರಾಜನು ಕೂಡಾ ಯುವರಾಜನಿಂದ ಶಿರಚ್ಛೇದಕ್ಕೆ ಗುರಿಯಾದನು. ನಿರ್ದೋಷಿಯಾದ ದೊಡ್ಡ ವಜೀರನು ಹೇಗೆ ಕತ್ತಿಯಿಂದ ತಲೆ ಹಾರಿಸಲ್ಪಟ್ಟನೋ, ಹಾಗೆಯೇ ಯುವರಾಜನು ಭಟರಿಂದ ಆ ರಾಜನ ತಲೆಯನ್ನೂ ಕಡಿಸಿದನು.

ಮುದುಕ ನೌಕರನಿಗೆ ಯುವರಾಜನು ತನ್ನ ರಾಜ್ಯದ ಒಂದು ಪ್ರಾಂತವನ್ನೂ, ಹೇರಳ ಧನವನ್ನೂ ಕೊಟ್ಟು, ರಾಜನನ್ನಾಗಿ ಮಾಡಿ ಗೌರವಿಸಿದನು.

ಅದುವರೆಗೂ ತಂದೆಯ ಮರಣವನ್ನು ನೆನೆದು ದುಃಖಿಸಿಕೊಂಡಿದ್ದ ದೊಡ್ಡ ವಜೀರನ ಮಗಳು, ಹೀಗೆ ಪ್ರತೀಕಾರ, ಪ್ರತ್ಯುಪಕಾರಗಳು ನಡೆದ ಮೇಲೆ ಮುಗುಳುನಗು ನಕ್ಕಳು. ಈಗ ಅವಳು ತನ್ನನ್ನು ಮದುವೆಯಾಗಲು ಸಿದ್ಧಳಾದಳೆಂದು ತಿಳಿದು, ಯುವರಾಜನು ಆನಂದಗೊಂಡು ಶುಭಕಾರ್ಯಕ್ಕೆ ತೊಡಗಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೪ ಮೇ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



Pramod Bhanushali



Smt. V. Rajamani

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಮಾರ್ಚಿ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಜನವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಫೋನಿನಲ್ಲಿ ಮಕ್ಕಳಾಟ ಸಲ್ಲ

ಎರಡನೇ ಫೋಟೋ : ಇವನಿಗೆ ಅಂಥಾ ಗೊಡವೆ ಏನಿಲ್ಲ

ಕಳುಹಿಸಿದವರು : ಶ್ರೀಮತಿ ಜಯಶ್ರೀ, ಕೊಡಿಯಾಲಬೈಲ್, ಮಂಗಳೂರು.

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಈಸ್ಟ್ ಇಂಡಿಯಾ ಕಂಪೆನಿಯ ಪ್ರತಿನಿಧಿಯಾದ ಜಾಬ್ ಚಾರ್ನಾಕ್ : ೧೬೯೦ ನೇ ವರ್ಷದಲ್ಲಿ. ೨. ಅಕ್ಬರ್ ಚಕ್ರವರ್ತಿ. ೩. ದಯೋಡರಸ್. ೪. ಬರ್ಮಾರಾಜ ಬೋಡಾಪಾಯನು ಮಣಿಪೂರನ್ನೂ, ಅಸ್ಸಾಮಿನ ಸ್ವಲ್ಪ ಭಾಗವನ್ನೂ ಆಕ್ರಮಿಸಿಕೊಂಡನು. ೫. ರಾಜಾರಾಮ ಮೋಹನರಾಯ್.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




## ೧೦

[ಭಲ್ಲೂಕಕೇತು ಪಿಶಾಚಿ ಗಣಗಳಿಗೆ ನಾಯಕನಾಗಿರಲು ಒಪ್ಪಿಕೊಳ್ಳಲಿಲ್ಲ. ಬೇರೆ ಉಪಾಯವೇನಿಲ್ಲದೆ ಪದ್ಮಪಾದನು ತನ್ನ ದೇಶಕ್ಕೆ ಹೊರಟನು. ಅವನೊಂದಿಗೆ ಹೊರಟ ಪಿಂಗಳನು, ಪದ್ಮಪಾದನ ಮನೆಯಲ್ಲಿ ಒಂದು ವಾರ ಅತಿಥಿಯಾಗಿದ್ದು, ಆಮೇಲೆ ಭಲ್ಲೂಕಕೇತುವಿನ ಮೇಲೇರಿ ತನ್ನ ಮನೆಗೆ ತಲಪಿದನು. ನೆನೆಸಿದಾಗ ಬರುವೆನೆಂದು ಭಲ್ಲೂಕಕೇತು ಮಾಯವಾಗಿದ್ದನು. ಪಿಂಗಳನು ಭಿಕ್ಷುಕಿಯಾಗಿದ್ದ ತನ್ನ ತಾಯಿಯನ್ನು ನೋಡಿದನು.]

ತನ್ನ ತಾಯಿಯ ಪರಮ ದೀನಾವಸ್ಥೆಯನ್ನೂ ಅವಳ ಸೊರಕಲು ಶರೀರವನ್ನೂ ನೋಡಿ ಪಿಂಗಳನು ನಿರ್ವಿಣ್ಣನಾಗಿ, ನಡುಗುವ ಕಂಠದಿಂದ ಕರೆದ ಶಬ್ದ ಕೇಳಿ ತಾಯಿ ಅವನನ್ನು ನೋಡಿ, ಗುರುತು ಹಿಡಿದು ತಬ್ಬಿಬ್ಬಾದಳು. ಪುಳಕ್ಕನೆ ಉಕ್ಕುವ ಕಣ್ಣೀರಿನೊಂದಿಗೆ ಅವಳು ನಡುಗುತ್ತಾ ಎದ್ದು, "ಬಂದೆಯಾ ಮಗಾ! ಎಷ್ಟು ಕಾಲದ ಮೇಲೆ ನಿನ್ನನ್ನು ನೋಡಿದೆ!" ಎಂದು ಪಿಂಗಳನನ್ನು ತಬ್ಬಿಕೊಂಡಳು.

ಪಿಂಗಳನು ಅವಳನ್ನು ಸಮಾಜಾಯಿಸುತ್ತಾ, "ಅಮ್ಮಾ, ನಿನ್ನ ಸ್ಥಿತಿ ಇಷ್ಟೊಂದು ನಿಕೃಷ್ಟವಾಯಿತೇಕೆ? ನಾನು ಪ್ರಯಾಣ ಹೊರಡುವ ಮೊದಲು ನಿನ್ನ ಕೈಗೆ ಸಾವಿರ ಮೊಹರೀ ಕೊಟ್ಟೆನಲ್ಲವ? ಅದೆಲ್ಲಾ ಏನಾಯಿತಮ್ಮಾ? ಕಳ್ಳರು ಗಿಳ್ಳರು ಬಿದ್ದು ದೋಚಿಕೊಂಡರೇ? ಕೇಳುವವರಿಲ್ಲದೆ ಹೋದರೇ? ನಿನ್ನ ಅವಸ್ಥೆ ಹೀಗಾಗುವಾಗ ಅಣ್ಣಂದಿರಿಬ್ಬರೂ ಎಲ್ಲಿದ್ದಾರೆ?" ಎಂದು ಕೇಳಿದನು.

ತಾಯಿ ಕೂಡಲೇ ಉತ್ತರ ಹೇಳಲಾಗದೆ ತತ್ತರಗೊಂಡಳು. ಕಡೆಗೆ ಅವಳು ಕಣ್ಣೀರು ಒರೆಸಿಕೊಳ್ಳುತ್ತ, "ನಿನ್ನ ಅಣ್ಣಂದಿರಿಂದಾಗಿಯೇ ನನಗೆ ಈ ಕಷ್ಟ ಬಂತು ಕಂದಾ. ನೀನು ಅತ್ತ ಹೋದ ಕೂಡಲೇ



ಅವರಿಬ್ಬರೂ ನನ್ನನ್ನು ಹೊಡೆದು ಬೈದು ಆ ಸಾವಿರ ಮೊಹರಿಗಳನ್ನೂ ಎಳೆದುಕೊಂಡು ಹೋದರು. ಹೋದವರು ಈವರೆಗೂ ತಿರುಗಿ ಬರಲಿಲ್ಲ. ಎಲ್ಲಿಗೆ ಹೋದರು, ಏನಾದರು ಎಂಬುದೊಂದೂ ನಾ ಕಾಣೆನಪ್ಪಾ" ಎಂದಳು.

ತಾಯಿಯ ಮಾತು ಕೇಳಿ ಪಿಂಗಳನು ನಿಶ್ಚೇಷ್ಟಿತನಾದನು. ಹಡೆದ ತಾಯಿಯನ್ನೇ ಹಿಂಸಿಸುವ ಕ್ರೂರಿಗಳಾದ ಅಣ್ಣಂದಿರ ಸಂಗತಿ ತಿಳಿದು ಪಿಂಗಳನು ಬಹಳ ನೊಂದನು. ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರಿಗೆ, ಅಷ್ಟೊಂದು ಕೆಟ್ಟ ಗುಣ ಹೇಗೆ ಬಂದಿತೆಂದು ಆಶ್ಚರ್ಯಪಟ್ಟನು. ಆದರೂ ತಾನಾಗಿ ತನ್ನ ಸೋದರರನ್ನು ಹತಮಾಡಲು ಪ್ರಯತ್ನಿಸುವುದು ಧರ್ಮವಲ್ಲವೆಂದೇ ಅವನಿಗೆ ತೋರಿತು.

ಪಿಂಗಳನು ಕೃಶಳಾದ ತಾಯಿಯನ್ನು ನಡೆಸಿಕೊಂಡು ಮನೆಯೊಳಗೆ ಹೋಗಿ "ಅಮ್ಮಾ, ಇನ್ನು ನೀನು ದುಃಖಪಡಬೇಕಾದ ಅಗತ್ಯವೇ ಇಲ್ಲ. ದೇವರ ದಯದಿಂದ ನಾನು ಎಲ್ಲಾ ಪರೀಕ್ಷೆಗಳಲ್ಲಿಯೂ ಗೆದ್ದು, ಎಷ್ಟೋ ಹಣದೊಂದಿಗೆ ಮನೆಗೆ ಬಂದಿದ್ದೇನೆ. ನಿನ್ನ ಕಷ್ಟಗಳೂ, ನನ್ನ ಕಷ್ಟಗಳೂ ಈ ದಿನದಿಂದ ಮುಗಿದು ಹೋದುವೆಂದು ತಿಳಿ" ಎಂದು ತನ್ನೊಂದಿಗೆ ತಂದ ಚೀಲದೊಳಗಿನಿಂದ ಬೆಲೆಬಾಳುವ ಮುತ್ತು, ರತ್ನ ಬಂಗಾರಗಳನ್ನು ತೆಗೆತೆಗೆದು ತಾಯಿಗೆ ತೋರಿಸಿದನು. ನೆಲದಲ್ಲಿ ದೊಡ್ಡದೊಂದು ರಾಶಿಯಾಯಿತು. ಅದನ್ನೆಲ್ಲಾ ಚೀಲಗಳಲ್ಲಿ ತುಂಬಿಸಿ ಕಟ್ಟಿ ಭದ್ರವಾಗಿಟ್ಟನು.

ತಾಯಿಗಾದ ಆನಂದಕ್ಕೆ ಮೇರೆ ಇಲ್ಲದೆ ಹೋಯಿತು. ಅವಳು ಎರಡು ಕೈಗಳಿಂದಲೂ, ಚೀಲದೊಳಗಿರುವ ವಸ್ತುಗಳನ್ನು ಮುಟ್ಟಿ ಮುಟ್ಟಿ ನೋಡುತ್ತ, "ಕಂದಾ, ನೀನು ಅದೃಷ್ಟಶಾಲಿಯಪ್ಪಾ, ಆದ್ದರಿಂದಲೇ ಎಂತೆಂಥಾ ಕಷ್ಟಗಳನ್ನು ಇದಿರಿಸಿದರೂ ಪಾರಾಗಿ ಬರುವಂತಾಯಿತು. ಈಗ ನನಗೆ ತಾಳಲಾಗದಷ್ಟು ಹಸಿವೆ. ನಿನಗೂ ತುಂಬಾ ಹಸಿವೆಯಾಗಿರಬಹುದು. ಮೊದಲು ಪೇಟೆಗೆ ಹೋಗಿ ಎರಡು ರೊಟ್ಟೀ ತಗೊಂಡು ಬಾರಪ್ಪ. ಚಟ್ನಿಯೋ, ಪಲ್ಯವೋ ಹಾಕಿಸಿಕೊಂಡು ಬೇಗ ಬಂದುಬಿಡು. ಆಮೇಲೆ ಎಲ್ಲಾ ನಿಧಾನವಾಗಿ ಮಾತಾಡುವಾ" ಎಂದಳು.

ತಾಯಿಯ ಮಾತು ಕೇಳಿ ಪಿಂಗಳನಿಗೆ ಫಕ್ಕನೆ ನಗೆ ಬಂದಿತು. ಅವನು ತಾಯಿಯನ್ನು ಗೋಡೆಯ ಬದಿಯಲ್ಲಿರುವ ಪೀಠದ ಮೇಲೆ ಕುಳ್ಳಿರಿಸಿ, ಅವಳ ಇದಿರಿನಲ್ಲಿ ದೊಡ್ಡದೊಂದು ಎಲೆಯನ್ನು ಹರಡಿದನು. ಆಮೇಲೆ ತನ್ನೊಂದಿಗಿದ್ದ ಮಂತ್ರದ ಚೀಲವನ್ನು ಅವಳಿಗೆ ತೋರಿಸುತ್ತ, "ಅಮ್ಮಾ, ನಿನಗೆ ಎಂತಹ ಪದಾರ್ಥಗಳು ಬೇಕೆಂದು ಕಾಣುತ್ತವೋ ನೆನೆಸಿಕೋ, ಬರೇ ಅನ್ನ ಸಾರು ಮಾತ್ರವೇ ಅಲ್ಲ, ಎಂತೆಂತಹ ಭಕ್ಷ್ಯ ಬೇಕೆಂದರೂ ಸರಿಯೇ. ಕ್ಷಣದಲ್ಲೇ ತರಿಸಿಕೊಡುತ್ತೇನೆ. ಭಕ್ಷ್ಯಗಳ ಹೆಸರುಗಳು ನನಗಿಂತ ಹೆಚ್ಚು ನಿನಗೇ ಗೊತ್ತು!" ಎಂದನು.

"ಏನು ಹುಚ್ಚು ಮಾತು ಮಗಾ! ಇನ್ನೂ ನಿನ್ನ ಹುಡುಗಾಟದ ಬುದ್ಧಿ ಬಿಟ್ಟ ಪಾಡಿಲ್ಲ. ಹಸಿವೆಯಿಂದ ಪ್ರಾಣ ಕಡೆಮುಟ್ಟಿಕೊಂಡಿರುವಾಗ ಭಕ್ಷ್ಯಗಿಕ್ಷ್ಯಾ ಅಂತ ಹರಟುತ್ತೀಯಾ! ಹುಚ್ಚು ಮಾತು ಕಟ್ಟಿಟ್ಟು ಬೇಗ ಅಂಗಡಿಗೆ ಹೋಗಿ ಎರಡು ರೊಟ್ಟೀ ತೆಗೆದುಕೊಂಡು ಬಾರಪ್ಪ, ಸಾಕು" ಎಂದಳು ತಾಯಿ.



ಪಿಂಗಳನು ತಾಯಿಯ ಪಕ್ಕದಲ್ಲಿ ಚಕ್ಕನೆ ಕುಳಿತು, ಮಂತ್ರಪಠಿಸಿ, ಚೀಲದೊಳಗೆ ತನ್ನ ಕೈಯನ್ನು ತುರುಕಿ ಬಿಸಿ ಬಿಸಿಯಾದ ರೊಟ್ಟಿಗಳನ್ನು ಹೊರಕ್ಕೆ ಎಳೆದನು. ಈ ವಿಚಿತ್ರದಿಂದ ಬಾಯಿ ಬಿದ್ದುಹೋದ ತಾಯಿ, ಬಾಯಿ ಬಿಡುವುದರೊಳಗೆ, ಪಿಂಗಳನು ಚೀಲದೊಳಗಿನಿಂದ ಒಂದರ ಮೇಲೊಂದರಂತೆ, ಭಕ್ಷ್ಯಗಳನ್ನೂ ಮೇಲೋಗರಗಳನ್ನೂ, ಪಾಯಸವನ್ನೂ ಹೊರಗೆಳೆದು ಎಲೆಯ ಮೇಲೆ ಅಟ್ಟಟ್ಟಿಯಾಗಿ ಇಟ್ಟನು. ಘಮಘಮಾಯಿಸುವ ಭೋಜನ ಪದಾರ್ಥಗಳು!

ತಾಯಿ ದೊಡ್ಡ ದೊಡ್ಡ ಕಣ್ಣುಗಳಿಂದ ಅವುಗಳನ್ನು ನೋಡುತ್ತ "ಏನಪ್ಪಾ, ಇದೆಲ್ಲಾ! ಮಂತ್ರವೋ ಮಾಯವೋ! ಅಲ್ಲ ನನಗೆ ಸ್ವಪ್ನ ಬಿದ್ದಿದೆಯೋ? ನನಗೊಂದೂ ಗೊತ್ತಾಗೋದಿಲ್ಲ. ಇಷ್ಟು ಸಣ್ಣ ಚೀಲದಲ್ಲಿ ಇಷ್ಟೆಲ್ಲಾ ಪದಾರ್ಥಗಳು ಹೇಗೆ ಇಟ್ಟುಕೊಂಡೆ?" ಎಂದು ಕೇಳಿದಳು.

ಪಿಂಗಳನು ಮಂತ್ರದ ಚೀಲವನ್ನು ಮಡಚಿ ತನ್ನ ಬದಿಯಲ್ಲಿಟ್ಟುಕೊಂಡು, ಒಂದೊಂದು ಪದಾರ್ಥವನ್ನೇ ತಿನ್ನಲು ಪ್ರಾರಂಭಿಸಿ, ತಾಯಿಯ ಬಾಯಿಗೂ ತುರುಕಿ, "ಅಮ್ಮಾ, ಅದೆಲ್ಲಾ ಆಮೇಲೆ ಹೇಳುತ್ತೇನೆ. ನಿಜಕ್ಕೂ ಹೊಟ್ಟೆ ತುಂಬಿದರೆ, ನಾಲಗೆಗೆ ರುಚಿ ತಗಲಿದರೆ ಸ್ವಪ್ನ ಅಲ್ಲಾ ಅಂತ ಗೊತ್ತಾಗಿಬಿಡುತ್ತದೆ. ಮೊದಲು ಊಟ ಮಾಡಿ ಮುಗಿಸು" ಎಂದನು.

ಸ್ವಲ್ಪಹೊತ್ತಿಗೆ ಪಿಂಗಳನೊಂದಿಗೆ ಅವನ ತಾಯಿಯೂ ತೃಪ್ತಿಯಾಗಿ ಊಟ ಮಾಡಿದಳು. ಖಾಲಿಯಾದ ತಟ್ಟೆಗಳನ್ನೆಲ್ಲಾ ಪಿಂಗಳನು ಚೀಲದೊಳಗೆ ಹಾಕಿ ಮಾಯಮಾಡಿ, ಆ ಚೀಲವನ್ನು ತಾಯಿಗೆ ಕೊಡುತ್ತ, "ಇದನ್ನು ನಿನಗಾಗಿಯೇ ತಂದಿದ್ದೇನಮ್ಮ. ಇವತ್ತಿನಿಂದ ನಿನಗೆ ಅಡಿಗೆ ಮಾಡುವ ಕೆಲಸವಿಲ್ಲ. ಈ ಚೀಲದಲ್ಲಿ ಅದ್ಭುತವಾದ ಶಕ್ತಿ ಇದೆ. ಅದರ ಪ್ರಭಾವದಿಂದ ನಮಗೆ ಬೇಕಾದ ವಸ್ತುಗಳನ್ನು ನೆನೆಸಿಕೊಂಡು ಕೈಹಾಕಿದರೆ, ಆ ಪದಾರ್ಥ ಸಿಗುತ್ತವೆ. ಅದಕ್ಕಾಗಿ ಪಠಿಸಬೇಕಾದ ಮಂತ್ರ ಇದೇ. ಕಲಿತಿಟ್ಟುಕೋ" ಎಂದು ತಾಯಿಯ ಕಿವಿಯಲ್ಲಿ ಮಂತ್ರವನ್ನು ಹೇಳಿ, "ಈ ರಹಸ್ಯವನ್ನು ಮಾತ್ರ ಯಾರಿಗೂ ಗೊತ್ತಾಗದಂತೆ ನೋಡಿಕೋ" ಎಂದು ಎಚ್ಚರಿಕೆಯನ್ನೂ ಹೇಳಿದನು. ಮುದುಕಿಯಾದ ತಾಯಿ ತುಂಬ ಭಯಭಕ್ತಿಯಿಂದ ಆ ಚೀಲವನ್ನು ನೋಡಿದಳು.

ಹೀಗೆ ಆ ತಾಯಿ ಮಗಂದಿರು ಸವಿಸವಿ ಸಂತೋಷ ಸಂಭ್ರಮದಲ್ಲಿರುವಾಗ, ಬೀದಿ ಬಾಗಿಲ

ಹೊರಗೆ ಯಾರೋ ಕೆಟ್ಟ ದನಿಯಲ್ಲಿ ಗಟ್ಟಿಯಾಗಿ ರೋದಿಸುತ್ತಿರುವುದು ಕೇಳಿಸಿತು.

ಪಿಂಗಳನು ಅದೇನೆಂದು ತಿಳಿಯುವ ಆತುರದಲ್ಲಿ ಓಡಿಹೋಗಿ ಬಾಗಿಲು ತೆರೆದು ನೋಡಿದನು. ಅಲ್ಲಿ ಬಾಗಿಲಿನ ಹತ್ತಿರ ಅವನ ಅಣ್ಣಂದಿರಿಬ್ಬರು, ಜೀವ ದತ್ತ ಲಕ್ಷದತ್ತರು ಹರಕು ಬಟ್ಟೆಗಳಿಂದ, ಕೆದರಿದ ಕೂದಲುಗಳಿಂದ ಒಬ್ಬರನ್ನೊಬ್ಬರು ಅಪ್ಪಿಕೊಂಡು ಭೋರಿಡುತ್ತಿದ್ದರು.

ಅಷ್ಟೊಂದು ದೀನಾವಸ್ಥೆಯಲ್ಲಿ ತನ್ನ ಅಣ್ಣಂದಿ ರನ್ನು ನೋಡುತ್ತಲೇ, ಪಿಂಗಳನಲ್ಲಿ ಅವರ ಮೇಲಿದ್ದ ಕೋಪವು ಮಾಯವಾಗಿ, ಎಲ್ಲಿಲ್ಲದಷ್ಟು ಸೋದರ ಪ್ರೇಮ ಉಕ್ಕಿತು. ಮೊದಲು ಅವರಿಗೆ ಬಂದ ಕಷ್ಟವೇನೆಂದು ತಿಳಿಯಬೇಕೆನಿಸಿತು. ತಾಯಿಗೆ ಮಾಡಿದ ದ್ರೋಹಕ್ಕೆ ಬುದ್ಧಿ ಬಂದಿರಬೇಕೆಂದು ಅಂದುಕೊಂಡು, ಅವನು ಅವರ ಹತ್ತಿರ ಹೋಗಿ, "ಅಣ್ಣಂದಿರಾ! ನೋಡಿ ಇಲ್ಲಿ. ಅಳಬೇಡಿ. ದೇವರ ದಯದಿಂದ ನಾನಿಷ್ಟು ಹಣ ಸಂಪಾದಿಸಿ ಕ್ಷೇಮವಾಗಿ ಮನೆಗೆ ಬಂದುಬಿಟ್ಟೆ. ನಮ್ಮ ಕಷ್ಟಗಳೆಲ್ಲಾ ತೀರಿತು. ಇನ್ನು ಹಾಯಾಗಿ ಬದುಕಿಕೊಂಡಿರಬಹುದು. ಒಳಗೆ ಬನ್ನಿ ನಿಮ್ಮ ವಿಷಯ ತಾಯಿ ನನಗೆಲ್ಲಾ ಹೇಳಿದ್ದಾಳೆ. ಆದುದಾಯಿತು, ಬನ್ನಿ" ಎಂದನು.

ಪಿಂಗಳನ ಮಾತು ಕೇಳಿ ಜೀವದತ್ತ, ಲಕ್ಷದತ್ತರು ಮುಖ ಮುಖ ನೋಡಿಕೊಂಡರು. ಆಮೇಲೆ ಜೀವ ದತ್ತನು ಬಿಕ್ಕುತ್ತ ನಡುಗುವ ಸ್ವರದಲ್ಲಿ, "ಇಲ್ಲಪ್ಪಾ, ತಮ್ಮಾ! ಪಿಂಗಳಾ! ನೀನು ಮನೆಗೆ ಬಂದೆಯಾ? ಒಳ್ಳೇದಾಯಿತು ಬಿಡೂ. ನಾವು ಮಹಾ ಪಾಪಿಗಳು. ಇವೊತ್ತಿಗೆ ನಮ್ಮ ಕಾಲ ತೀರಿತು. ನಾವು ಹೆತ್ತಮ್ಮ ನಿಗೆ ಎಷ್ಟೆಲ್ಲಾ ಅನ್ಯಾಯ ಮಾಡಿದೆವು ಅಂತ ಅಮ್ಮ ನಿನ್ನ ಹತ್ತಿರ ಹೇಳಿಯೇ ಇದ್ದಾಳು. ಇನ್ನು ಯಾವ ಮುಖ ಇಟ್ಟುಕೊಂಡು ಈ ಮನೆಯೊಳಗೆ ಕಾಲಿ ಟ್ಟೇವು? ಇಷ್ಟು ಕಾಲ ನೀನು ಯಾವಾಗ ಬರು ತ್ತೀಯೋ ಅಂತ ಕಾದುಕೊಂಡಿದ್ದೆವಪ್ಪಾ. ಇನ್ನು ನಮ್ಮ ದಾರಿ ಆ ಶುಕಸರೋವರವೇ! ಅದರಲ್ಲಿ ಮುಳುಗಿ ಸತ್ತರೇನೇ ನಮ್ಮ ಪಾಪಕ್ಕೆ ಪ್ರಾಯಶ್ಚಿತ್ತ



ವಾದೀತು. ಅಮ್ಮನಿಗೆ ನಮ್ಮ ಸಾವಿರ ನಮಸ್ಕಾರ ಹೇಳಪ್ಪಾ. ನಮ್ಮ ತಪ್ಪುಗಳನ್ನು ನೀನೂ ಕ್ಷಮಿಸಿ ಬಿಡು. ಇನ್ನು ಹೊರಡುತ್ತೇವೆ! ಇನ್ನು ಯಾರಿಗೂ ನಮ್ಮ ಮುಖವೇ ಕಾಣಲಾರದು. ಅಪ್ಪಣೆ!" ಎನ್ನುತ್ತಾ, ಹೋ ಎಂದು ಅತ್ತುಕೊಂಡು ಹಿಂದಿರುಗಿ ನೋಡದೆಯೇ ಹೋಗತೊಡಗಿದರು.

ಪಿಂಗಳನು ಚಂಗನೆ ಹಾರಿ ಅವರಿಬ್ಬರಿಗೂ ಅಡ್ಡ ನಿಂತು, "ಅಯ್ಯಯ್ಯೋ! ಅಣ್ಣಗಳಿರಾ! ಹೋಗ ಬೇಡಿ! ನಿಲ್ಲಿರಿ! ಈಗ ಎಲ್ಲಿಗೆ ಹೊರಟಿರಿ?" ಎಂದನು.

"ಎಲ್ಲಿಗೋ? ಅಹ್ಹಹ್ಹಹ್ಹಾ!" ಎಂದು ಜೀವ ದತ್ತ, ಲಕ್ಷದತ್ತರು ಹುಚ್ಚರ ಹಾಗೆ ನಕ್ಕು, "ತಮ್ಮಾ, ದಾರಿಬಿಡಪ್ಪಾ! ನಮ್ಮ ಪಾಪಗಳಿಗೆ ಪ್ರಾಯಶ್ಚಿತ್ತ ವಾಗಲೇ ಬೇಕು. ತಾಯಿಯನ್ನು ರಂಪದಲ್ಲಿ ರಾಚಿದ ಪಾಪಕ್ಕೆ ಗುರಿಯಾಗಿದ್ದೇವೆ. ಆ ಶುಕಸರೋವರವೇ ನಮಗೆ ಶರಣು ನಮ್ಮನ್ನು ತಡೆಯಬೇಡಪ್ಪಾ! ಅಮ್ಮನಿಗೂ ಹೇಳು" ಎಂದು ಅಣ್ಣಂದಿರಿಬ್ಬರೂ ಮುಂದೆ ನಡೆಯಲು ಕಾಲ್ಗೆಗೆದರು.

ಅಷ್ಟರಲ್ಲಿ ತಾಯಿ ಕೂಡಾ ಬಾಗಿಲ ಹತ್ತಿರ ಬಂದು, ತನ್ನ ದೊಡ್ಡ ಮಗಂದಿರಿಬ್ಬರನ್ನೂ ನೋಡಿ, ಕನಿಕರದಿಂದ ದ್ರವಿಸಿದಳು. ಆ ಕ್ಷಣದಲ್ಲಿ ಅವರಿ ಬ್ಬರೂ ಈ ಮೊದಲು ತನಗೆ ಮಾಡಿದ ಅನ್ಯಾಯ ವನ್ನೆಲ್ಲಾ ಮರೆತಳು. ಎಲ್ಲಿಲ್ಲದ ಪುತ್ರ ಪ್ರೇಮದಿಂದ ಅವರ ಬಳಿಗೆ ಬಂದು, "ಅಪ್ಪಗಳಿರಾ, ಅಳಬೇಡಿ ರಪ್ಪ, ದೇವರ ದಯದಿಂದ ನಿಮ್ಮ ಚಿಕ್ಕ ತಮ್ಮ ತುಂಬಾ ಧನದೊಂದಿಗೆ ತಿರುಗಿ ಬಂದಿದ್ದಾನೆ. ನಡೆದ ದ್ದೆಲ್ಲಾ ಮರೆತು ಬಿಡಿರಿ. ಇನ್ನು ಮೇಲಾದರೂ ಸುಖವಾಗಿ ಸಂತೋಷವಾಗಿ ಕಾಲಕ್ಷೇಪ ಮಾಡೋಣ, ಬನ್ನಿ. ಒಬ್ಬರನ್ನೊಬ್ಬರು ನೋಡಿಕೊಂಡು ಯಾವ ಚಿಂತೆಯೂ ಇಲ್ಲದೆ ಒಟ್ಟಾಗಿರೋಣ" ಎಂದಳು.

"ನೀನು ಕ್ಷಮಿಸಿದರೂ ಮಾಡಿದ ಪಾಪ ಹಾಗೇ ಇರುತ್ತದಲ್ಲಾ! ನಾವು ಬುದ್ಧಿ ಕೆಟ್ಟು ಮಾಡಿದ ಪಾಪ, ಸಾಮಾನ್ಯವಾದುದೇ? ಅದಕ್ಕೆ ಪ್ರಾಯ ಶ್ಚಿತ್ತ ಹೇಗೆ ಅಮ್ಮಾ? ನಾವು ನಿನ್ನೊಂದಿಗಿರಲು ತಕ್ಕವರೇ ಅಲ್ಲ" ಎಂದರು ಏಕಕಂಠದಿಂದ.





“ಪಶ್ಚಾತ್ತಾಪ ಎಂಬುದು ಎಲ್ಲಾ ಪಾಪಗಳನ್ನೂ ಭಸ್ಮ ಮಾಡಿಬಿಡುತ್ತದೆ. ಇನ್ನು ಹಿಂದಿರುಗಿ ಮನೆಯೊಳಗೆ ಬನ್ನಿ. ಏನೋ ಹುಡುಗಾಟದ ಮೂಲಕ ತಿಳಿದೋ ತಿಳಿಯದೆಯೋ ನನಗೇನಾದರೂ ಅನ್ಯಾಯ ಮಾಡಿದ್ದರೆ, ನಿಮ್ಮನ್ನು ಹಡೆದ ತಾಯಿ ನಾನು ಮರೆಯಲಾರೆ ಅಂದುಕೊಂಡಿರಾ! ಮಂಗ ಮಕ್ಕಳಾ! ನಿಮ್ಮನ್ನು ಹಡೆದ ನಾನು ಕ್ಷಮಿಸಿಬಿಟ್ಟರೆ ದೇವರು ಕೂಡ ಏನೂ ಮಾಡಲಾರ” ಎಂದು ಮಗಂದಿರಿಬ್ಬರ ಕೈಗಳನ್ನೂ ಹಿಡಿದುಕೊಂಡಳು.

ಜೀವದತ್ತ, ಲಕ್ಷದತ್ತರು ಇಷ್ಟವಿಲ್ಲದವರ ಹಾಗೆ ಬಿಕ್ಕುತ್ತ ಮೂಲುಗುತ್ತ ಮನೆಯೊಳಗೆ ಬಂದರು. ತಾಯಿ ಅತಿಸಂಭ್ರದಿಂದ ಆಗಿಂದಾಗಲೇ ಅವರಿಬ್ಬರಿಗೂ ಸ್ನಾನಕ್ಕೆ ನೀರುತೋಡಿ, ಉಟ್ಟುಕೊಳ್ಳಲು ಪಿಂಗಳನು ತಂದ ಬೆಲೆಬಾಳುವ ಪಟ್ಟೆ ವಸ್ತ್ರಗಳನ್ನು ತೆಗೆದು ಕೊಟ್ಟಳು. ಅವರಿಬ್ಬರೂ ಆಶ್ಚರ್ಯದಿಂದ ಅವುಗಳನ್ನು ತೆಗೆದುಕೊಂಡು, ಸ್ನಾನಮಾಡಿ, ಆ ಬಟ್ಟೆಗಳನ್ನು ಧರಿಸಿಕೊಂಡು ತಾಯಿಯನ್ನೂ ಪಿಂಗಳನನ್ನೂ ಬಹಳ ಆಪ್ಯಾಯತೆಯಿಂದ ಆಲಿಂಗಿಸಿಕೊಂಡು “ಇನ್ನು ತಿನ್ನಲಿಕ್ಕೆ ಏನಾದರೂ ಇದ್ದರೆ ಕೊಡಿರಿ. ಸಂತೋಷವಾದ್ದರಿಂದ ಹಸಿವೆ ಭಗಭಗನೆ ಉರಿಯಲು ತೊಡಗಿತು. ಸಾಯುವ ಆಲೋಚನೆಯಲ್ಲಿದ್ದಷ್ಟು ಹೊತ್ತೂ ಅದು ಗೊತ್ತೇ ಆಗಲಿಲ್ಲ. ಮೂರು ದಿನಗಳಿಂದ ಏನೂ ತಿಂದಿಲ್ಲ. ತಿನ್ನುವ ಮನಸ್ಸೂ ಇಲ್ಲ. ಈಗ ನಿಮ್ಮಿಬ್ಬರ ಪುಣ್ಯದಿಂದ ನಾವೂ ಮನುಷ್ಯರ ಹಾಗೆ ಆದೆವು” ಎಂದರು.

ಪಿಂಗಳನು ಮಂತ್ರದ ಚೀಲವನ್ನು ತೆಗೆದುಕೊಂಡು ಅಡಿಗೆ ಮನೆಯೊಳಗೆ ಹೋಗಿ, ತಾಯಿಗೆ ಅದನ್ನು ಕೊಟ್ಟು ಅಣ್ಣಂದಿರ ಬಳಿಗೆ ಬಂದು ಕುಳಿತನು. ನಾಲ್ಕೈದು ನಿಮಿಷಗಳ ಮೇಲೆ ತಾಯಿ ಬಗೆಬಗೆಯ ಭೋಜನ ಪದಾರ್ಥಗಳನ್ನು ತಟ್ಟೆಗಳಲ್ಲಿ ಇಟ್ಟುಕೊಂಡು ಬಂದು ದೊಡ್ಡ ಮಗಂದಿರ ಮುಂದೆ ಓರಣವಾಗಿ ಅಣಿಗೊಳಿಸಿ ಇಟ್ಟಳು.

ಜೀವದತ್ತ, ಲಕ್ಷದತ್ತರು ಅವರಾವರನೆ ಎಲ್ಲ ಪದಾರ್ಥಗಳನ್ನೂ ಸ್ವಲ್ಪ ಹೊತ್ತು ತಿನ್ನುವುದರಲ್ಲಿ ಮಗ್ನರಾಗಿ, “ಅಮ್ಮಾ, ನಿನ್ನ ಕೈಯಿಂದ ಏನಾದರೂ ಒಂದು ಪದಾರ್ಥ ಮಾಡಿದ್ದರೇ ಸಾಕು. ರುಚಿಯಾಗಿರುತ್ತ. ಇಷ್ಟೆಲ್ಲಾ ಪದಾರ್ಥಗಳನ್ನು ಏಕೆ ಮಾಡಿದಿ? ನಾವೇನೂ ಅತಿಥಿಗಳಲ್ಲವಷ್ಟೆ? ಸುಮ್ಮಸುಮ್ಮನೆ ಹಣ ದಂಡ” ಎಂದರು.

ಅದಕ್ಕೆ ಪಿಂಗಳನು ನಗುತ್ತ, “ಅಣ್ಣಗಳಿರಾ, ನಾವು ಇನ್ನು ಪ್ರತಿದಿನವೂ ಇಂಥಾ ಊಟವನ್ನೇ ಮಾಡಬಹುದು. ಬೇಕಾದರೆ ಈ ಪಟ್ಟಣದಲ್ಲಿರುವ ಬಡಬಗ್ಗರಿಗೆ ಕೂಡಾ ಇಷ್ಟೊಂದು ಉತ್ತಮವಾದ ಊಟ ಹಾಕಲೂ ಬಹುದು. ಇದರಿಂದ ಅಮ್ಮನಿಗೆ ಸಂತೋಷವೇ ಹೊರತು ಕಷ್ಟವೇನೂ ಇಲ್ಲ. ಅದೆಲ್ಲಾ ಚಿಂತೆ ಬಿಟ್ಟು ನಿಧಾನವಾಗಿ ಹಾಕಿಸಿಕೊಂಡು ಊಟ ಮಾಡಿರಿ” ಎಂದನು.



ಪಿಂಗಳನ ಮಾತುಗಳನ್ನು ಕೇಳಿ ಜೀವದತ್ತನು ಲಕ್ಷದತ್ತನಿಗೆ ಸಂಜ್ಞೆ ತೋರಿಸಿದನು. ಅವನು ಕೂಡಾ ಏನೋ ಅರ್ಥವಾದ ಹಾಗೆ ತಲೆಯಾಡಿಸಿ ಸುಮ್ಮನೆ ಊಟಮಾಡಿದನು.

ಆ ದಿನ ರಾತ್ರಿ ಊಟಗಳೆಲ್ಲ ಮುಗಿದ ಮೇಲೆ ಜೀವದತ್ತ, ಲಕ್ಷದತ್ತರು ಸ್ವಲ್ಪ ಗಾಳಿಯಲ್ಲಿ ತಿರುಗಾಡಿ ಬರುತ್ತೇವೆಂದು ಹೇಳಿಕೊಂಡು ಒಳ್ಳೆಯ ದುಸ್ತಿನಲ್ಲಿ ಮನೆಯಿಂದ ಹೊರಟರು.

ಅವರಿಬ್ಬರಿಗೂ ಪಿಂಗಳನು ಹೇರಳ ಧನದೊಂದಿಗೆ ಬಂದ ವಿಷಯ ಗೊತ್ತಾಗಿತ್ತು. ಆ ಹಣವನ್ನು ತಾವು ವಶಪಡಿಸಿಕೊಳ್ಳುವುದು ಹೇಗೆ? ಇದೇ ಅವರ ಮುಂದೆ ಈಗ ತೋರಿದ ಪ್ರಶ್ನೆ. ತಮ್ಮ ತಾಯಿ ಆ ದಿನ ಬೆಳಗ್ಗೆಯಾಗಲೀ, ಸಾಯಂಕಾಲವಾಗಲೀ ಒಲೆ ಹಚ್ಚಿದಂತೆ ಕಾಣಲೇ ಇಲ್ಲ. ಜೀವದತ್ತನು ಅಡಿಗೆ ಮನೆಯೊಳಗೆ ಹೋಗಿ ಪರೀಕ್ಷೆ ಮಾಡಿದ್ದನು. ಅಡಿಗೆಯೇ ಮಾಡದೆ ಅಷ್ಟೆಲ್ಲ ಪದಾರ್ಥಗಳು ಎಲ್ಲಿಂದ ಬಂದುವೆಂದು ಅವನಿಗೆ ಅರ್ಥವಾಗಲಿಲ್ಲ. ಪಿಂಗಳನ ಪ್ರವರ್ತನೆಯಲ್ಲಿ ಇಬ್ಬರಿಗೂ ಏನೋ ಅನುಮಾನ.

"ಪಿಂಗಳನು ಹೇಗೋ ಬಹಳ ಹಣ ತಂದಿದ್ದಾನೆ. ಅದರಲ್ಲಿ ಸಂದೇಹವೇ ಇಲ್ಲ. ಅದನ್ನು ನಾವು ನಿಧಾನವಾಗಿ ವಶಪಡಿಸಿಕೊಳ್ಳಬಹುದು. ನಾವು ತುಂಬಾ ಪಶ್ಚಾತ್ತಾಪದಲ್ಲಿದ್ದೇವೆಂದು ಅಮ್ಮ ನಂಬುವ ಹಾಗೆ ಪಿಂಗಳನೂ ನಂಬಿದ್ದಾನೆ. ಅದು ಹಾಗಿರಲಿ. ನಾವೀಗ ಎರಡು ಹೊತ್ತು ಔತಣದ ಊಟ ಮಾಡಿದ್ದೇವೆ. ಅಡಿಗೆ ಕೋಣೆ ನೋಡಿದರೆ ಒಲೆ ಹಚ್ಚಿದ ಲಕ್ಷಣವೇ ಇಲ್ಲ. ಇದೊಂದು ವಿಚಿತ್ರ ಹೌದೋ ಅಲ್ಲವೋ?" ಎಂದನು ಜೀವದತ್ತ.

ಲಕ್ಷದತ್ತನು ಆಶ್ಚರ್ಯದಿಂದ ತಲೆಯಾಡಿಸಿ, "ಅಂದರೆ ಪಿಂಗಳನು ಯಾವುದೋ ಮಂತ್ರವೋ, ತಂತ್ರವೋ ಕಲಿತುಕೊಂಡು ಬಂದು ಇದೆಲ್ಲಾ ಮಾಡುತ್ತಾನೆಂದು ಕಾಣುತ್ತೆ. ಆದರಿಂದಲೇ ಅವನು ಅಷ್ಟೊಂದು ಧೀರತನದಿಂದ ಪಟ್ಟಣದಲ್ಲಿರುವ ಬಡಬಗ್ಗರಿಗೆಲ್ಲಾ ಈ ಭೋಜನವೇ ಹಾಕಬಹುದು ಅನ್ನುತ್ತಾನೆ. ಅವನನ್ನು ಕೇಳಿ ಪ್ರಯೋಜನವಿಲ್ಲ. ಸಮಯ ನೋಡಿ ಅಮ್ಮನನ್ನು ಕೇಳಿದರೆ ಈ ಗುಟ್ಟು ಗೊತ್ತಾಗದೆ ಹೋಗದು" ಎಂದನು.

ಈ ದುಷ್ಟ ಅಣ್ಣ ತಮ್ಮಂದಿರಿಬ್ಬರೂ ಮರುದಿನ ಪಿಂಗಳನು ಮನೆಯಲ್ಲಿಲ್ಲದ ಸಮಯ ನೋಡಿ, ತಾಯಿಯ ಹತ್ತಿರ ಸೇರಿ, ಅದೂ ಇದೂ ಮಾತಾಡುತ್ತ, ಊಟದ ವಿಷಯವನ್ನೆತ್ತಿ ಆ ವಿಚಿತ್ರವೇನೆಂದು ಕೇಳಿದರು. ಅವಳು ಬಹಳ ಹೊತ್ತಿನವರೆಗೂ ಪಿಂಗಳನು ತಂದ ಮಂತ್ರದ ಚೀಲವನ್ನು ಕುರಿತು ಹೇಳಲಿಲ್ಲ. ಆದರೆ ಮಗಂದಿರಿಬ್ಬರೂ ಅಂಗಲಾಚಿ ಕೇಳುವಾಗ, ಬೇರೆಯಾರಿಗೂ ಹೇಳಬಿಡಬೇಡಿರೆಂದು ಹೇಳುತ್ತ, ಮಂತ್ರದ ಚೀಲವನ್ನು ತಂದು ಅವರಿಬ್ಬರಿಗೂ ತೋರಿಸಿಬಿಟ್ಟಳು.

"ಆ ಮಂತ್ರ ಯಾವುದೆಂದು ಹೇಳಮ್ಮಾ. ಈ ಕ್ಷಣ ದಲ್ಲಿ ನನಗೆ ಜಿಲೇಬಿ ಬೇಕು. ನಾನೇ ಕೈ ಹಾಕಿ ತೆಗೆಯಬೇಕು" ಎಂದನು ಜೀವದತ್ತ.

ತಾಯಿ ಮಗನ ಮೇಲಿರುವ ಪ್ರೇಮದ ಮೌಢ್ಯ ದಲ್ಲಿ ತೇಲಿ, ಅವರು ಈ ಮೊದಲು ತನಗೆ ಮಾಡಿದ ಹಿಂಸೆಗಳನ್ನೆಲ್ಲಾ ಮರೆತು, ಅವರಿಗೆ ಆ ಮಂತ್ರ ಹೇಳಿ, ಅವರ ಕೈಯಿಂದಲೇ ಬೇಕಾದ ಪದಾರ್ಥಗಳನ್ನು ಹೊರಗೆ ತೆಗೆಸಿದಳು. ಆಗ ಜೀವದತ್ತ ಲಕ್ಷದತ್ತರ ಆನಂದವು ಹದ್ದುಮೀರಿ ಹೋಯಿತು.

ಆ ದಿನ ರಾತ್ರಿ ಆ ಕೆಟ್ಟ ಅಣ್ಣ ತಮ್ಮಂದಿರು ತಾಯಿಯ ಮೇಲೆಯೂ, ಪಿಂಗಳನ ಮೇಲೆಯೂ ತಮ್ಮ ಕುತಂತ್ರವನ್ನು ಪ್ರಾರಂಭಿಸಿದರು. ಮೊದಲು ಪಿಂಗಳನನ್ನು ಮನೆಯಲ್ಲಿಲ್ಲದ ಹಾಗೆ ಮಾಡಿಬಿಟ್ಟರೆ, ತಾಯಿ ತಮ್ಮನ್ನು ಏನೂ ಮಾಡಲಾರಳೆಂದು ಅವರಿಗೆ ಗೊತ್ತು. ಆದರೆ ಪಿಂಗಳನ ಪೀಡೆಯನ್ನು ದೂರ ಮಾಡುವ ಬಗೆ ಹೇಗೆ? ಇದು ಅವರ ಮುಂದಿರುವ ದೊಡ್ಡ ಪ್ರಶ್ನೆ.

"ನನಗೊಂದು ಉಪಾಯ ಕಾಣುತ್ತದೆ, ಮೊನ್ನೆ ನಾನು ದೊಡ್ಡ ಪೇಟೆಯಲ್ಲಿ ಬರುವಾಗ ಹಡಗಿನ ಸರಂಗನೊಬ್ಬನನ್ನು ನೋಡಿದೆ. ಅವನಿಗೆ ಸಮುದ್ರ ದಲ್ಲಿ ಹಡುಗು ನಡೆಸಲಿಕ್ಕೆ ಯುವಕರಾದ ನಾವಿಕರು ಬೇಕಂತೆ. ಅಗತ್ಯವಿದ್ದರೆ ಎಷ್ಟು ಹಣವನ್ನಾದರೂ ಕೊಟ್ಟು ಮನೆಯ ಹಿರಿಯರಿಂದ ಯುವಕರನ್ನು ಕೊಂಡುಕೊಳ್ಳುವ ಹಾಗೆ ಮಾತಾಡಿಕೊಂಡಿದ್ದ. ನಾವು ಅವನ ಹತ್ತಿರ ಮಾತಾಡಿ, ಪಿಂಗಳನನ್ನು ಉಪಾಯ ವಾಗಿ ಅವನಿಗೆ ಮಾರಿಬಿಡೋಣ. ನಾವು ನಮ್ಮ ಮನೆಗೆ ಹಿರಿಯರೇ ತಾನೇ?" ಎಂದನು ಜೀವದತ್ತ.

"ಹೌದು. ನಿಜ. ಒಳ್ಳೇ ಆಲೋಚನೆ. ಹಾಗೇ ಮಾಡೋಣ. ಆ ಸರಂಗನನ್ನು ನೋಡಿ ಮಾತಾಡೋಣ ನಡೆ" ಎಂದನು ಲಕ್ಷ ದತ್ತ.

ಅಣ್ಣ ತಮ್ಮಂದಿರಿಬ್ಬರೂ ಕೂಡಿ ಆ ಸರಂಗನು ಉಳಿದುಕೊಂಡ ಬಿಡಾರದ ಕಡೆಗೆ ಹೋದರು. ಅವನು ದೊಡ್ಡ ಮನುಷ್ಯರಂತೆ ಕಾಣುವ ಅಣ್ಣ ತಮ್ಮಂದಿರಿಗೆ ಸಕಲ ಮರ್ಯಾದೆಗಳನ್ನೂ ಮಾಡಿ, ಬಂದ ಕಾರ್ಯವೇನೆಂದು ಕೇಳಿದನು.

"ಅಯ್ಯಾ, ಸರಂಗಮಹಾಶಯರೇ! ನಮಗೆ ಪಿಂಗಳನೆಂಬ ಒಬ್ಬ ತಮ್ಮನಿದ್ದಾನೆ. ಅವನೊಬ್ಬ ಶುದ್ಧ ಮೊಂಡುಗಾರನಾಗಿ, ಸುಮ್ಮನಿರದೆ ಬೇಡದ ಸಾಹಸ ಮಾಡುತ್ತ ತಿರುಗುತ್ತ, ದುಂದುವ್ಯಯ ಮಾಡುತ್ತ ನಮ್ಮನ್ನೂ, ತಾಯಿಯನ್ನೂ ಹಿಂಸಿಸುತ್ತ ಓಡಿ ಹೋಗುತ್ತಾ ಇರುತ್ತಾನೆ. ಅವನನ್ನು ಹೇಗೆ ನಿಭಾಯಿಸುವುದೋ ನಮಗಂತೂ ಗೊತ್ತಾಗುವು ದಿಲ್ಲ." ಎಂದು ಜೀವದತ್ತನು ಅಲ್ಲಿಗೆ ಮಾತು ನಿಲ್ಲಿ ಸಿದನು.

—(ಇನ್ನೂ ಇದೆ)

